ಕುರ್‌ಆನ್ ಮತ್ತು ಪ್ರವಾದಿ ಚರ್ಯೆಯ ತತ್ವಾದರ್ಶಗಳನ್ನು ಸಾರುವ

# ಪವಿತ್ರ ಸಂದೇಶ

ಕನ್ನಡ ಪಾಕ್ಷಿಕ

**ಚಂದಾದಾರ ವಿವರ**

| | | |
|---|---|---|
| **ದೇಶ** | | |
| ವಾರ್ಷಿಕ | ₹ | 250-00 |
| ಅರ್ಧ ವಾರ್ಷಿಕ | ₹ | 150-00 |
| ಬಿಡಿ ಪ್ರತಿ | ₹ | 10-00 |
| **ಗಲ್ಫ್ ರಾಷ್ಟ್ರಗಳಿಗೆ** | | |
| ವಾರ್ಷಿಕ | ₹ | 2,000-00 |
| ಅರ್ಧ ವಾರ್ಷಿಕ | ₹ | 1,000-00 |

❖ ಸಂಪುಟ: 20 ❖ ಸಂಚಿಕೆ: 4 ❖ ಪುಟ: 12 ❖ ಮಾರ್ಚ್ 01-15, 2016 ❖ ಬೆಲೆ: ₹ 10 http://www/salafimangalore.org



## ಮುಸ್ಲಿಮ್ ಜಗತ್ತಿನಲ್ಲಿ ಶಿಥಿಲತೆ ಸೃಷ್ಟಿಸಿದ ಶಿಯಾಯಿಸಮ್!

ಸರಕಾರಗಳು ಮತ್ತು ಆದರ್ಶಗಳ ವಿರುದ್ಧ ಶತ್ರುಗಳು ಹೆಚ್ಚಾಗಿ ಕುತಂತ್ರಗಳನ್ನು ರೂಪಿಸುವುದು ತೆರೆಮರೆಯಲ್ಲಾಗಿದೆ. ಇಂತಹ ಸಂಘಟನೆಗಳು ಪ್ರಾರಂಭದಲ್ಲಿ ಬಹಳ ನಿಗೂಢ ರೀತಿಯಲ್ಲಿ ಕಾರ್ಯಾಚರಿಸುತ್ತವೆ. ಬಹಳ ಜಾಗರೂಕರಾಗಿ ದುರ್ಬಲ ವಿಶ್ವಾಸದ ಜನರನ್ನು ಆಯ್ದು ಅವರ ಮಿದುಳಿಗೆ ತಮ್ಮ ವಿಷಪೂರಿತ ಆಶಯಗಳನ್ನು ತುರುಕುತ್ತಾರೆ. ದೊಡ್ಡದೊಂದು ಜನ ಸಮೂಹ ಅವರ ಬಲೆಯಲ್ಲಿ ಬಿದ್ದ ಬಳಿಕವೇ ಸರಕಾರಗಳಿಗೆ ಮತ್ತು ಸಮುದಾಯಗಳಿಗೆ ಇಂತಹ ಗೂಢ ಸಂಘಟನೆಗಳ ಗುಪ್ತ ಕಾರ್ಯಾಚರಣೆ ಗಮನಕ್ಕೆ ಬರುತ್ತದೆ. ಅಷ್ಟರಲ್ಲಿ ವಿಷಯ ಕೆಟ್ಟಿರುತ್ತದೆ.

ಮುಸ್ಲಿಮ್ ಸಮುದಾಯದ ಇತಿಹಾಸವನ್ನು ಪರಿಶೋಧಿಸುವುದಾದರೆ ಇಂತಹ ನೂರಾರು ಘಟನೆಗಳನ್ನು ಕಾಣಬಹುದಾಗಿದೆ. ಆದರೆ ಅಂತಹ ಷಡ್ಯಂತ್ರಗಳನ್ನು ಮುಂಚಿತವಾಗಿ ಕಂಡು ಹಿಡಿಯಲಿಕ್ಕಾಗಲಿ, ಒಮ್ಮೆ ಸಂಭವಿಸಿದ ದುರಂತವು ಪುನರಾವರ್ತನೆಗೊಳ್ಳದಂತೆ ಮುಂಜಾಗ್ರತೆ ಕೈಗೊಳ್ಳಲಿಕ್ಕಾಗಲಿ ಆಯಾ ಕಾಲದ ಆಡಳಿತರೂಢರಿಗೆ ಸಾಧ್ಯವಾಗಲಿಲ್ಲವೆಂಬುದು ಒಂದು ವಾಸ್ತವವಾಗಿದೆ. ಆದರೆ ಶತ್ರುಗಳ ಕುತಂತ್ರಗಳ ವಾಸನೆ ಹಿಡಿದು ಬಹಳ ಚಾಣಕ್ಷ್ಯಯಿಂದ ವ್ಯವಸ್ಥಿತ ಕಾರ್ಯಾಚರಣೆಯ ಮೂಲಕ ಅವೆಲ್ಲವನ್ನೂ ಪರಾಭವಗೊಳಿಸಿದ ಚತುರ ಆಡಳಿತಗಾರರೊಬ್ಬರು ಇತಿಹಾಸದಲ್ಲಿ ಎದ್ದು ಕಾಣುತ್ತಾರೆ. ಅವರೇ ಫಾತಿಮಿಗಳಿಂದ ಈಜಿಪ್ಟನ್ನು ಮತ್ತು ಶಿಲುಬೆ ಯುದ್ಧಕೋರರಿಂದ ಖುದ್ಸನ್ನು ವಿಮೋಚಿಸಿದ ಸುಲ್ತಾನ್ ಸಲಾಹುದ್ದೀನ್ ಅಯ್ಯೂಬಿ. ಅತ್ಯಂತ ಪ್ರತಿಕೂಲ ಸನ್ನಿವೇಶದಲ್ಲಿ ಅತಿ ಸಮರ್ಥವಾಗಿ ಅಡೆತಡೆಗಳನ್ನು ನೀಗಿಸಿ ಅಧಿಕಾರಕ್ಕೇರಿ ಇಸ್ಲಾಮ್ ವಿರೋಧಿ ಪ್ರವೃತ್ತಿಗಳನ್ನು ಬೇರು ಸಹಿತ ಕಿತ್ತೊಗೆದ ತುರ್ಕಿಯ ಉರ್ದುಗಾನ್, ಸುಲ್ತಾನ್ ಸಲಾಹುದ್ದೀನ್ ಅಯ್ಯೂಬಿಯವರ ಜೈತ್ರ ಯಾತ್ರೆಯನ್ನು ಸ್ಮರಿಸುತ್ತದೆ.

ಮುಸ್ಲಿಮ್ ಸಮೂಹವನ್ನು ಅಂತ್ಯವಿಲ್ಲದ ದುರಂತಗಳಿಗೂ ಸಂಕಷ್ಟಗಳಿಗೂ ಬಲಿಗೊಟ್ಟದ್ದು ಶಿಯಾಯಿಸಮ್ ಎಂಬ ನಿಗೂಢ ಸಂಘಟನೆ ಹುಟ್ಟಿಕೊಳ್ಳುವುದರ ಮೂಲಕವಾಗಿದೆ. ಶಾಂತಿ-ಸಮಾಧಾನಗಳ ಪ್ರತಿರೂಪವಾಗಿರುವ ಒಂದು ಧರ್ಮದ ಇತಿಹಾಸ ಮತ್ತು ವರ್ತಮಾನಗಳು ಕಲಹ ಕಲುಷಿತವೂ ರಕ್ತರಂಜಿತವೂ ಆಗಲು ಕಾರಣವೇನು? ಮುಸ್ಲಿಮ್ ರಾಷ್ಟ್ರಗಳಲ್ಲಿ ಮೊಳಗುತ್ತಿರುವ ಗುಂಡಿನ ಶಬ್ದ, ಸ್ಫೋಟ ಮತ್ತು ರಕ್ತಸಿಕ್ತ ಕಲಹಗಳಿಗೆಲ್ಲಾ ಯಾರು ಕಾರಣ? ಇತ್ಯಾದಿ ಪ್ರಶ್ನೆಗಳಿಗೆ ಉತ್ತರವನ್ನು ಹುಡುಕುವುದಾದರೆ ಅದರ ಹಿಂದಿನ ನಿಜವಾದ ಶಕ್ತಿ ಶಿಯಾಯಿಸಮ್ ಎಂಬ ಉಗ್ರ ಸಂಘಟನೆಯಾಗಿದೆಯೆಂಬುದನ್ನು ಕಂಡುಕೊಳ್ಳಬಹುದಾಗಿದೆ. (6ನೇ ಪುಟಕ್ಕೆ)

## ಸಂಪಾದಕೀಯ

ಮುಸ್ಲಿಮರಾದ ನಾವು ಭಯೋತ್ಪಾದನೆಯನ್ನು ವಿರೋಧಿಸುತ್ತೇವೆ. ಇಸ್ಲಾಮ್ ಎಲ್ಲಾ ಧರ್ಮಕ್ಕಿಂತಲೂ ಹೆಚ್ಚಾಗಿ ಉಗ್ರವಾದವನ್ನು ವಿರೋಧಿಸುತ್ತದೆ. ಪ್ರವಾದಿ(ಸ)ರು ಕೂಡಾ ಉಗ್ರವಾದದ ವಿರುದ್ಧ ದನಿಯೆತ್ತಿದ್ದಾರೆ. ಹೀಗಿದ್ದೂ ಉಗ್ರವಾದದ ಪಟ್ಟಿಯಲ್ಲಿ ಮುಸ್ಲಿಮರು ಮುಂಚೂಣಿಯಲ್ಲಿರಲು ಕಾರಣವೇನು? ಉಗ್ರವಾದಿ ಎಂದ ಕೂಡಲೇ ಟೋಪಿಯಿಟ್ಟು ಗಡ್ಡ ಬೆಳೆಸಿದ ವ್ಯಕ್ತಿಯ ಚಿತ್ರಣ ಮನದಲ್ಲಿ ಮೂಡಿ ಬರಲು ಕಾರಣವೇನು?

ಪವಿತ್ರ ಕುರ್‌ಆನ್ ಹಾಗೂ ಪ್ರವಾದಿ ಚರ್ಯೆಗಳು ಉಗ್ರವಾದವನ್ನು ವಿರೋಧಿಸಿದ್ದರೂ ಉಗ್ರವಾದಿ ಚಟುವಟಿಕೆಗಳಲ್ಲಿ ಮುಸ್ಲಿಮರೇ ಮುಂಚೂಣಿಯಲ್ಲಿರಲು ಕಾರಣವೇನೆಂದು ಅನೇಕರು ಪ್ರಶ್ನಿಸಬಹುದು. ಇದು ಬಹುತೇಕ ಮಂದಿಯ ಹೃದಯಗಳಲ್ಲಿ ರುವ ಒಂದು ಪ್ರಶ್ನೆಯಾಗಿದೆ. ಈ ರೀತಿಯ ಒಂದು ಭಾವನೆಯನ್ನು ಜಗತ್ತಿನ ಸಮಸ್ತ ಜನರ ಮಸ್ತಿಷ್ಕಗಳಲ್ಲಿ ಮೂಡಿಸಲಾಗಿದೆ. ಮುಸ್ಲಿಮರು ಭಯೋತ್ಪಾದಕರು ಎಂಬ ಪ್ರಚಾರವನ್ನು



## ಮುಸ್ಲಿಮ್ ಭಯೋತ್ಪಾದನೆಯನ್ನು ಆವಿಷ್ಕರಿಸಿದ್ದು ಹೇಗೆ?

ಸಲಫಿ ಆಂದೋಲನಗಳ ಸತ್ಯ ಸಂದೇಶ ಪ್ರಚಾರ ಅಭಿಯಾನದ ಪರಿಣಾಮವಾಗಿ ಜಗತ್ತಿನಾದ್ಯಂತ ಇಸ್ಲಾಮಿನ ಆದರ್ಶ ಅನುಷ್ಠಾನಗೊಳ್ಳುತ್ತಿದ್ದು ಪಾಶ್ಚಾತ್ಯ ಉತ್ಪನ್ನಗಳ ಮಾರಾಟಕ್ಕೆ ನೈಜ ಇಸ್ಲಾಮ್ ಮಾರಕ ಹೊಡೆತವಾಗಿದೆ ಎಂಬುದನ್ನರಿತ ಪಾಶ್ಚಾತ್ಯ ಶಕ್ತಿಗಳು ಜಾಗತಿಕ ಮಟ್ಟದಲ್ಲಿ ಇಸ್ಲಾಮಿನ ಬೆಳವಣಿಗೆಯನ್ನು ತಡೆಯಲಿಕ್ಕಾಗಿ "ಮುಸ್ಲಿಮ್ ಭಯೋತ್ಪಾದನೆ"ಯನ್ನು ಹುಟ್ಟು ಹಾಕಿದ್ದಾರೆ.

ಜಾಗತಿಕ ಮಟ್ಟದಲ್ಲಿ ಹರಡಲಾಗಿದೆ. ಅದಕ್ಕೆ ಹಲವಾರು ಕಾರಣಗಳಿವೆ. ಆ ಕಾರಣಗಳನ್ನು ತಿಳಿಸುವುದಕ್ಕಿಂತ ಮುಂಚೆ ಉಗ್ರವಾದದ ಪಟ್ಟಿಯಲ್ಲಿ ಮುಸ್ಲಿಮರು ಮುಂಚೂಣಿಯಲ್ಲಿದ್ದಾರೆಯೇ ಎಂಬುದನ್ನು ಪರಿಶೀಲಿಸೋಣ.

ನಮ್ಮ ದೇಶದಲ್ಲಿ ಕಳೆದ 10 ವರ್ಷಗಳ ಅವಧಿಯಲ್ಲಿ ಉಗ್ರವಾದಿ ಚಟುವಟಿಕೆಗಳಲ್ಲಿ ಸಕ್ರಿಯರಾಗಿರುವವರು ಯಾರೆಂದು ಕೇಳಿದರೆ "ಹಿಝ್‌ಬುಲ್ ಮುಜಾಹಿದೀನ್, ಲಷ್ಕರ್-ಎ-ತ್ವಯ್ಯಿಬ, ಜೈಶ್-ಎ-ಮುಹಮ್ಮದ್, ಇಂಡಿಯನ್ ಮುಜಾಹಿದೀನ್" ಎಂದೆಲ್ಲಾ ಉತ್ತರ ಲಭಿಸಬಹುದು. ಆದರೆ ವಾಸ್ತವ ತದ್ವಿರುದ್ಧವಾಗಿದೆ. ನಮ್ಮ ದೇಶದ ಗೃಹ ಇಲಾಖೆಯ ಪ್ರಕಾರ ಉಗ್ರಗಾಮಿ ಚಟುವಟಿಕೆಗಳಲ್ಲಿ ದಾಖಲಾದ ಪ್ರಕರಣಗಳಲ್ಲಿ ಪ್ರಥಮ ಸ್ಥಾನ ನಕ್ಸಲ್ ಉಗ್ರಗಾಮಿಗಳಿಗೆ ಸಲ್ಲುತ್ತದೆ. ಎರಡನೇ ಸ್ಥಾನ ಯಾರಿಗೆಂದು ಕೇಳಿದರೆ ಆಗಲೂ ಮುಸ್ಲಿಮರೆಂಬ ಉತ್ತರ ಸಿಗಬಹುದು. ಇದರ ಗೃಹ ಇಲಾಖೆಯ ಲೆಕ್ಕ ಪ್ರಕಾರ ಎರಡನೇ ಸ್ಥಾನ ಬೋಡೋ ಉಗ್ರವಾದಿಗಳಿಗೆ ಸಲ್ಲುತ್ತದೆ. ನಮ್ಮ ದೇಶದ ಭೀಕರ ಪ್ರರಣಗಳ ಅಧ್ಯಯನ ಮಾಡಿದರೆ 2002ರಲ್ಲಿ ಗುಜರಾತಿನಲ್ಲಿ ನಡೆದ ಸುಮಾರು 2000 ಮಂದಿಯ ಕ್ರೂರ ಹತ್ಯೆ. ಜಗತ್ತಿನ ಯಾವುದೇ ವಿಧ್ವಂಸಕ ಕೃತ್ಯಗಳಿಗಿಂತ ಕಡಿಮೆ ಯಿಲ್ಲ. ಆದರೂ ಈ ರಾಕ್ಷಸೀಯ ಕೃತ್ಯವೆಸಗಿ ದವರನ್ನು ಉಗ್ರವಾದಿಗಳೆಂದಾಗಲಿ, ಭಯೋತ್ಪಾದಕರೆಂದಾಗಲಿ ಯಾರೂ ಹೇಳುವುದಿಲ್ಲ. ಆದರೆ ಕಳೆದ ಹಲವು ವರ್ಷಗಳಿಂದ ಮುಸ್ಲಿಮರ ಭಯೋತ್ಪಾದನೆಯ ಹಣೆಪಟ್ಟಿ ಕಟ್ಟುವ ಮೂಲಕ ಒಂದು ರಾಜಕೀಯ ತಂತ್ರಗಾರಿಕೆ ಯನ್ನು ರೂಪಿಸಲಾಗಿದೆ. ಈ ತಂತ್ರಗಾರಿಕೆಗೆ ಪಾಶ್ಚಾತ್ಯ ರಾಷ್ಟ್ರಗಳ ರಾಜಕೀಯ ತಜ್ಞನೂ, ಅಮೇರಿಕಾದ ಆಡಳಿತ ಸಲಹೆಗಾರನೂ ಆದ ವಿಲ್ಯಮ್ ಡಿ. ಲ್ಯಾಂಬ್ ಎಂಬಾತನು 1986 ರಲ್ಲಿ "Fourth generation Warfire" ಎಂಬ ಸಾಂಕೇತಿಕ ಶಬ್ದವನ್ನು ಬಳಸಿದ್ದಾನೆ. ಅದಕ್ಕೊಂದು ಕಾರಣವಿದೆ.

(2ನೇ ಪುಟಕ್ಕೆ)

# ಮಕ್ಕಳ ಮನಸ್ಸಲ್ಲಿ ಸದ್ಗುಣಗಳ ಬೀಜ ಬಿತ್ತಿರಿ

ಮುಂಚೆ ಮನೆ ತುಂಬಾ ಮಕ್ಕಳು, ಮಿತವಾದ ಆದಾಯ. ಮಕ್ಕಳಿಗೆ ಹಿರಿಯರೊಂದಿಗೆ ಅಂತಹ ಸಲಿಗೆ ಎಂಬುದಿರದೆ ಒಂಥರ ಬಿಗುವಿನ ವಾತಾವರಣ. ಅಪ್ಪನೊಡನೆ ಯಾವತ್ತೂ ಮನಬಿಚ್ಚಿ ಮಾತನಾಡಿರದ ಹಲವರು, ಒಂದು ಪ್ಯಾಕೆಟ್ ಬಿಸ್ಕತ್ತನ್ನು ಹತ್ತು ಹನ್ನೆರಡು ಮಂದಿ ಹಂಚಿ ತಿನ್ನಬೇಕಾಗಿದ್ದ ಕಾಲ.

ಅವಿಭಕ್ತ ಕುಟುಂಬಗಳು. ಶಾಲೆಗೆ ಹೊರಡುವಾಗ ಈಗಿನಂತೆ ಪಾಕೆಟ್ ಮನಿಯ ಸಂಸ್ಕಾರ ಇರಲೇ ಇಲ್ಲ. ಕೆಲವರಿಗಂತೂ ದಿನವೂ ಹೊಟ್ಟೆ ತುಂಬಾ ಅನ್ನ ದೊರಕುತ್ತಿರಲಿಲ್ಲ. ಮನೆ ತುಂಬಾ ಮಕ್ಕಳಿದ್ದು ನಿಯಮಿತವಾದ ಆದಾಯದಲ್ಲಿ ಮನೆ ಖರ್ಚು, ಮಕ್ಕಳ ವಿದ್ಯಾಭ್ಯಾಸ, ಔಷಧಿ, ಅದು ಇದು ಎಂದು ಖರ್ಚಿನ ಮೇಲೆ ಖರ್ಚಾದಾಗ ಮಕ್ಕಳಿಗೆ ಪಾಕೆಟ್ ಮನಿ ಕೊಡುವುದಾದರೂ ಎಲ್ಲಿಂದ?

ಆಗೆಲ್ಲಾ ಯಾವುದಾದರೂ ಹಬ್ಬಕ್ಕೆ ಹಿರಿಯರು ಎಂಟಾಣೆಯೋ, ಒಂದು ರೂಪಾಯಿಯೋ ನೀಡಿದರೆ ಅದನ್ನು ನಿಧಿಯಂತೆ ಕಾಪಾಡಿಕೊಂಡಿರುತ್ತಿದ್ದೆವು. ಯಾವಾಗಲಾದರೂ ನಾಲ್ಕಾಣೆಯ ಬಣ್ಣದ ಐಸ್ ಕ್ಯಾಂಡಿ ಕೊಂಡು ತಿಂದರೆ ಅದು ದೊಡ್ಡ ವಿಷಯ. ಮತ್ತೆಲ್ಲಾದರೂ ಸ್ವಲ್ಪ ಜಾಸ್ತಿ ಹಣವಿದ್ದು ಬೆಲ್ಲದ ಐಸ್ ಕ್ಯಾಂಡಿಯಾದರೆ ಇನ್ನೂ ಜಾಸ್ತಿ ಮರ್ಯಾದೆ. ಅಪ್ಪಿ ತಪ್ಪಿ ಒಂದು ರೂಪಾಯಿಯ ತೆಳುವಾದ ಪೇಪರ್‌ನಿಂದ ಕವರ್ ಮಾಡಲ್ಪಟ್ಟ ದೂದ್ ಕ್ಯಾಂಡಿಯೇನಾದರೂ ಕೊಂಡುಕೊಂಡರೆ ಆತ ಮಹಾ ಶ್ರೀಮಂತ ಇತರರ ಕಣ್ಣಲ್ಲಿ.

ಹೌದು ಹಣದ ಬೆಲೆ ನಮಗೆ ತಿಳಿದಿತ್ತು. ಬೇಕೆಂದ ವಸ್ತುಗಳು ಬೇಕೆಂದಾಗ ಸಿಗುತ್ತಿರಲಿಲ್ಲ. ಒಂದು ಹೊಸ ವಸ್ತು ಬೇಕೆಂದರೆ ವರ್ಷವಿಡೀ ಅಪ್ಪನ ಕೃಪೆಗಾಗಿ ಕಾಯಬೇಕಿತ್ತು. ನಡುನಡುವೆ ಅಗತ್ಯ ಬಿದ್ದರೆ ಅಮ್ಮನ ಶಿಫಾರಸ್ಸೂ ಬೇಕಿತ್ತು. ಒಂದು ಪೆನ್ಸಿಲ್ ಮುಗಿದರೆ ಕಾರಣ ಹೇಳಬೇಕಿತ್ತು. ಮಳೆಗಾಲದಲ್ಲಿ, ಚಳಿಗಾಲದಲ್ಲಿ ಹೆಪ್ಪುಗಟ್ಟುವ ಪೆನ್ನಿನ ರೀಫಿಲನ್ನು ಬರೆಯುವಂತೆ ಮಾಡಲು ಸರ್ಕಸ್ಸೇ ಮಾಡಬೇಕಿತ್ತು.

ಏನಾದರೂ ಕುಡಿಯುವುದಿದ್ದರೂ ತಿನ್ನುವುದಿದ್ದರೂ ಸಮಪಾಲು, ಕ್ರಮಬದ್ಧ ಜೀವನ. ಈಗಿನಂತೆ ತಿಂಗಳಿಗೊಮ್ಮೆ ಬಟ್ಟೆ ಕೊಂಡುಕೊಳ್ಳುವ ಪರಿಪಾಠವಿರದೇ ವರ್ಷದಲ್ಲೊಂದು ಹಬ್ಬಕ್ಕೆ ಹೊಸಬಟ್ಟೆ. ಅದನ್ನು ಆದಿನ ತೊಟ್ಟು ಒಗೆದು ಮಡಚಿಟ್ಟರೆ ಮುಂದಿನ ಹಬ್ಬದವರೆಗೂ ಅದು ಪೆಟ್ಟಿಗೆಯಿಂದ ಹೊರಬಾರದು. ಮತ್ತೆ ಆ ವರ್ಷವಿಡೀ ನಡೆಯುವ ಮದುವೆ ಮುಂಜಿಗಳು, ನೆಂಟರ ಮನೆ ಭೇಟಿಗೆಲ್ಲಾ ಅದೇ ಬಟ್ಟೆ ಬೇಕು.

ಇಷ್ಟೆಲ್ಲಾ ಪೀಠಿಕೆ ಯಾಕೆ ಅಂತ ಅನಿಸುತ್ತಿರಬಹುದು ನಿಮಗೆ. ಕಾರಣ ಇಂದಿನ ಮಕ್ಕಳ ಜೀವನ ಶೈಲಿ. ಒಂದು ಕೇಳಿದರೆ ಹತ್ತು ತಂದು ಕೊಡುವ ಹೆತ್ತವರು. ನಮಗೆ ಸಿಗದೇ ಇದ್ದದ್ದು ನಮ್ಮ ಮಕ್ಕಳಿಗೆ ಸಿಗಲಿ ಎಂಬ ಬಯಕೆ. ಇದರಿಂದ ಉಂಟಾಗುವ ದುಷ್ಪರಿಣಾಮಗಳ ಬಗೆಗೂ ಚಿಂತಿಸಬೇಕು. ಅತಿಯಾದ ಸಲಿಗೆ, ಕೈತುಂಬಾ ಹಣ, ಕೇಳಿದ ವಸ್ತು ಕೂಡಲೇ ಸಿಗಬೇಕೆಂಬ ಹಠ ಇವೆಲ್ಲಾ ಮಕ್ಕಳನ್ನು ದಾರಿ ತಪ್ಪಿಸಬಹುದು. ನಮ್ಮ ಪ್ರಾಯದಲ್ಲಿ ನಾವಿಷ್ಟಪಟ್ಟ ವಸ್ತು ಸಮಯಕ್ಕೆ ಸಿಗದೆ ನಿರಾಸೆಯಾಗಿದೆ. ಹಾಗಾಗಿ ನಮ್ಮಂತಹ ನಿರಾಸೆ ನಮ್ಮ ಮಕ್ಕಳಿಗೆ ಬೇಡ ಎಂಬ ಭಾವನೆ ಪ್ರತೀ ಹೆತ್ತವರಿಗೂ ಇರುತ್ತದೆ. ಹಾಗೆಂದು ನಾವೇ ನಮ್ಮ ಮಕ್ಕಳನ್ನು ದುರ್ಬಲರನ್ನಾಗಿ ಮಾಡಿ ಅವರ ಭವಿಷ್ಯವನ್ನು ಅಂಧಕಾರಗೊಳಿಸುವುದು ಎಷ್ಟು ಸರಿ? ನಮ್ಮ ಹಿರಿಯರು ನಮಗೆ ನೀಡಿದ ಕ್ರಮಬದ್ಧವಾದ ಜೀವನದಿಂದಲೇ ತಾನೇ ನಮಗೆ ಈಗ ಯಾವ ಪರಿಸ್ಥಿತಿಗೂ ಒಗ್ಗಿಕೊಳ್ಳುವಂತಹ ಧೈರ್ಯ? ಅದನ್ನು ನಮ್ಮ ಮಕ್ಕಳಿಗೂ ನೀಡಬೇಕಾದದ್ದು ನಮ್ಮ ಕರ್ತವ್ಯ ತಾನೇ? (ಕೊನೆಯ ಪುಟಕ್ಕೆ)

# ಮುಸ್ಲಿಮ್ ಭಯೋತ್ಪಾದನೆಯನ್ನು ಆವಿಷ್ಕರಿಸಿದ್ದು ಹೇಗೆ?

(1ನೇ ಪುಟದಿಂದ)

ಅಫಘಾನಿಸ್ತಾನದಲ್ಲಿ ನಡೆದ ಸಂಘರ್ಷದಲ್ಲಿ ಅಮೇರಿಕಾ ಹಸ್ತಕ್ಷೇಪ ಮಾಡಿದ ಪರಿಣಾಮವಾಗಿ ಅಮೇರಿಕಾದ ಬಹಳಷ್ಟು ಮಂದಿ ಸೈನಿಕರು ಹತರಾದರು. ಹತ ಸೈನಿಕರ ಶವ ಪೆಟ್ಟಿಗೆಗಳು ಅಮೇರಿಕಾದ ವಿಮಾನ ನಿಲ್ದಾಣಗಳಲ್ಲಿ ಬಂದಿಳಿಯುತ್ತಿದ್ದುದು ನಿತ್ಯದ ದೃಶ್ಯವಾಗಿದೆ. ಈ ದುರಾವಸ್ಥೆಯಿಂದ ರಕ್ಷಣೆ ಹೊಂದಲಿಕ್ಕಾಗಿ ಹೊಸ ತಂತ್ರವೊಂದನ್ನು ಆವಿಷ್ಕರಿಸಿದರು. ಅದೆಂದರೆ ಈ ವರೆಗೆ ನಡೆಸುತ್ತಿದ್ದ ಬಾಂಬ್, ಕ್ಷಿಪಣಿ ಮುಂತಾದ ಆಯುಧಗಳ ಬದಲಿಗೆ ಮೆದುಳನ್ನು ಬಳಸಿ ಶತ್ರುಗಳನ್ನು ನಾಶ ಮಾಡುವ ತಂತ್ರ. ತಮ್ಮ ಸೈನಿಕರ ಹತ್ಯೆಯಾಗದೆ ಮಧ್ಯಪೂರ್ವ ದೇಶಗಳನ್ನು ದಮನಿಸಲು ಆ ದೇಶಗಳ ಜನರನ್ನೇ ಎತ್ತಿ ಕ್ಟಟುವ ಹೊಸ ಯುದ್ಧ ತಂತ್ರ. ತಮ್ಮ ಈ ತಂತ್ರಗಾರಿಕೆಗಾಗಿ ಮಾಧ್ಯಮವನ್ನು ಅವರು ಆಯುಧವಾಗಿ ಬಳಸಿಕೊಂಡರು. ಇದು ನಮ್ಮನ್ನು ನಾವೇ ಶತ್ರುಗಳಾಗಿ ಕಾಣುವ ಆಯುಧವಾಗಿದೆ.

ಪಾಶ್ಚಾತ್ಯ ಸಲಹೆಗಾರ ನೋವಮ್ ಜಾನ್ಸ್ಕಿಯ ಹೇಳಿಕೆಯಂತೆ ಅಣು ಬಾಂಬ್ ಸರ್ವ ಸಂಭಾವ್ಯವಾಗಿದೆ. ಆಟೋಮ್ ಬಾಂಬ್ ಜೀವಂತ ವಸ್ತುಗಳನ್ನು ಕೊಲ್ಲುವಂತಹದಾಗಿದೆ. ಮಾಧ್ಯಮ ಬಾಂಬ್ ತನಗೆ ತನ್ನನ್ನೇ ಶತ್ರುವನ್ನಾಗಿ ಮಾಡುವ ಆಯುಧವಾಗಿದೆ. ಮಾಧ್ಯಮವು ನಮಗೆ ನಮ್ಮನ್ನೇ ಶತ್ರುವಾಗಿ ಮಾಡುವುದು ಹೇಗೆ? ಸಹೋದರನ ಪ್ರಶ್ನೆಯು ಅದಕ್ಕೊಂದು ಉತ್ತಮ ಉದಾಹರಣೆಯಾಗಿದೆ.

ಕಳೆದ ಹಲವಾರು ವರ್ಷಗಳಿಂದ ಪಾಶ್ಚಾತ್ಯರ ಗಮನ ಮಧ್ಯಪೂರ್ವ ದೇಶಗಳ ಮೇಲೆ ನೆಟ್ಟಿದೆ. ಇದಕ್ಕೆ ಎರಡು ಕಾರಣಗಳಿವೆ. ಒಂದನೆಯದು ಅದು ಎಣ್ಣೆಯ ಸಾಮ್ರಾಜ್ಯ ಎಂಬುದಾಗಿದೆ. ಎರಡನೆಯದು ಅಲ್ಲಿನ ಸಂಸ್ಕೃತಿ. ಅದು ಪಾಶ್ಚಾತ್ಯ ಸಂಸ್ಕೃತಿಗೆ ತದ್ವಿರುದ್ಧವಾದ ಸಂಸ್ಕೃತಿಯಾಗಿದೆ. ಆದ್ದರಿಂದ ಅರಬ್ ಸಂಸ್ಕೃತಿಯೊಂದಿಗೆ ಪಾಶ್ಚಾತ್ಯರಿಗೆ ಅತಿಯಾದ ವಿರೋಧವಿದೆ. ಏಕೆಂದರೆ ಅವರು ಉತ್ಪನ್ನಗಳಿಗೆ ಜಾಗತಿಕ ಮಟ್ಟದಲ್ಲಿ ಮಾರುಕಟ್ಟೆ ಸಿಗಬೇಕು. ಅದು ಅಗತ್ಯವಿರುವಂತಹದಾಗಿರಲಿ, ಇಲ್ಲದಂತಹದಾಗಿರಲಿ, ಒಟ್ಟಿನಲ್ಲಿ ಅವರ ಉತ್ಪನ್ನದ ವಸ್ತುಗಳು ಜಾಗತಿಕ ಮಾರುಕಟ್ಟೆಯಲ್ಲಿ ಮಾರಾಟವಾಗಬೇಕು, ಹಣ ಸಂಪಾದಿಸಬೇಕು. ಅವರ ಉತ್ಪನ್ನಗಳಲ್ಲಿ ಪ್ರಮುಖವಾದುದೆಂದರೆ ಅಮಲು ಪದಾರ್ಥಗಳು, ಲಾಟರಿ, ಬಡ್ಡಿ, ಹೆಣ್ಣಿನ ಸೌಂದರ್ಯ ಸಾಧನಗಳು ಮತ್ತು ಹೆಣ್ಣಿನ ಶರೀರ. ಇವು ಪಾಶ್ಚಾತ್ಯರ ಪ್ರಮುಖ ವ್ಯಾಪಾರ ವಸ್ತುಗಳು. ಈ ಎಲ್ಲವನ್ನೂ ಇಸ್ಲಾಮ್ ನಿಷೇಧಿಸುತ್ತಿರುವುದರಿಂದ ಈ ಮೇಲಿನ 5 ವಸ್ತುಗಳ ಮಾರಾಟಕ್ಕೆ ಇಸ್ಲಾಮ್ ಮತ್ತು ಮುಸ್ಲಿಮರು ತಡೆಯಾಗಿದ್ದಾರೆಂಬುದನ್ನರಿತ ಪಾಶ್ಚಾತ್ಯರು ತಾವು ಆಯೋಜಿಸಿದ ಮಾಧ್ಯಮ ಯುದ್ಧದ ಮೂಲಕ ಜನಮನದಲ್ಲಿ ಮುಸ್ಲಿಮರು ಭಯೋತ್ಪಾದಕರು. ಇಸ್ಲಾಮ್ ಉಗ್ರವಾದವನ್ನು ಪ್ರೋತ್ಸಾಹಿಸುವ ಧರ್ಮ ಎಂದೆಲ್ಲಾ ಬಿಂಬಿಸಿ ತಮ್ಮ ಉದ್ದೇಶ ಸಾಧಿಸತೊಡಗಿದರು.

1800ನೇ ಇಸವಿಯ ಕಾಲಘಟ್ಟದಲ್ಲಿ ಪಾಶ್ಚಾತ್ಯರು ವ್ಯಾಪಾರಕ್ಕೆಂದು ಭಾರತಕ್ಕೆ ಬಂದರು. ಆದರೆ ಕ್ರಮೇಣ ಅವರು ಭಾರತವನ್ನೇ ತಮ್ಮ ತೆಕ್ಕೆಯೊಳಗೆ ತಂದರು. ಇದು ಪಾಶ್ಚಾತ್ಯರ ನೀತಿಯಾಗಿದೆ. ಅದೇ ರೀತಿ ಮಧ್ಯಪೂರ್ವ ರಾಷ್ಟ್ರಗಳ ಪೆಟ್ರೋಲ್‌ನ ಮೇಲೆ ಹಿಡಿತ ಸಾಧಿಸಬೇಕು ಮತ್ತು ತಮ್ಮ ಉತ್ಪನ್ನಗಳನ್ನು ಮಾರಬೇಕು. ಅದಕ್ಕಾಗಿ ಅವರು ಆವಿಷ್ಕರಿಸಿದ ಮಾಧ್ಯಮ ಯುದ್ಧ(ಮೀಡಿಯಾ ವಾರ್)ದ ತಂತ್ರ ಪ್ರಯೋಗಿಸಿ ತಮ್ಮ ಬೇಳೆ ಬೇಯಿಸ ತೊಡಗಿದರು. ಮುಸ್ಲಿಮರ ಗಡ್ಡವನ್ನು ಕಂಡೊಡನೆ ಉಗ್ರವಾದಿಗಳೆಂಬ ಹಣೆಪಟ್ಟಿ ಕಟ್ಟುವಂತೆ ಮಾಡಿದ್ದು ಮಾಧ್ಯಮ ಯುದ್ಧದ ಫಲವಾಗಿದೆ. ಭಾರತೀಯ ಪುರಾಣಗಳಲ್ಲಿ ಕಂಡು ಬರುವ ಋಷಿಮುನಿಗಳು, ಕಾರ್ಲ್ಸ್ ಮಾರ್ಕ್ಸ್, ರವೀಂದ್ರನಾಥ ಠಾಗೋರ್ ಮಾತ್ರವಲ್ಲ, ಬಹುತೇಕ ಸ್ವಾಮೀಜಿಗಳು ಮತ್ತು ಪಾಶ್ಚಾತ್ಯ ವಿಜ್ಞಾನಿಗಳು ಗಡ್ಡ ಬಿಟ್ಟವರಾಗಿದ್ದಾರೆ. ಅವರಿಗೆ ಉಗ್ರವಾದಿಗಳು, ಭಯೋತ್ಪಾದಕರು ಎಂದು ಹಣೆಪಟ್ಟಿ ಕಟ್ಟಲಾಗುತ್ತಿಲ್ಲ. ಆದರೆ ಪ್ರವಾದಿ(ಸ)ರವರ ಸುನ್ನತ್‌ನಂತೆ ಮುಸ್ಲಿಮ್ ಯುವಕರು ಗಡ್ಡ ಬೆಳೆಸಿದ್ದರೆ ಅವರ ಮೇಲೆ ಉಗ್ರವಾದದ ವಕ್ರನೋಟ ಬೀಳುತ್ತದೆ.

ಮುಖ, ಮುಂಗೈ ಬಿಟ್ಟು ದೇಹದ ಇತರ ಭಾಗಗಳನ್ನು ಮುಚ್ಚಿದ ಬಿಳಿ ವಸ್ತ್ರಧಾರಿ ಮಹಿಳೆಯರನ್ನು ಕಂಡರೆ ಯಾರೂ ಹೇಳದೆಯೇ ಕಾರುಣ್ಯದ ಪ್ರತೀಕವೆಂಬ ಭಾವನೆ ನಮ್ಮ ಮನದಲ್ಲಿ ಮೂಡುತ್ತದೆ. ಅದೇ ವೇಳೆ ಮುಖ, ಮುಂಗೈ ಬಿಟ್ಟು ದೇಹವಿಡೀ ಕಪ್ಪು ಪರ್ದಾ ಧರಿಸಿದ ಮುಸ್ಲಿಮ್ ಮಹಿಳೆಯರನ್ನು ಕಂಡಾಕ್ಷಣ, ಮುಸ್ಲಿಮ್ ಭೀಕರವಾದ, ನಾಲ್ಕು ಗೋಡೆಗಳೊಳಗಿನ ದಾಸ್ಯಸ್ತ್ರೀ ಇತ್ಯಾದಿ ಯೋಚನೆಗಳು ನಮ್ಮ ಮನದಲ್ಲಿ ಮೂಡುತ್ತದೆ. ಬಟ್ಟೆಯ ಬಣ್ಣವನ್ನನುಸರಿಸಿ ನಮ್ಮ ಮಿದುಳಲ್ಲಿ ವಿಭಿನ್ನ ಚಿಂತನೆಗಳುಂಟಾಗಲು ಕಾರಣವೇನು? ಇದು ಕಳೆದ ಹಲವಾರು ವರ್ಷಗಳಿಂದ ಪಾಶ್ಚಾತ್ಯ ಇಸ್ಲಾಮ್ ವಿರೋಧಿ ಶಕ್ತಿಗಳು ನಡೆಸಿದ ನಿರಂತರ ಪರಿಶ್ರಮದ ಫಲವಾಗಿದೆ. ನಮಗೆ ನಾವೇ ಶತ್ರುಗಳಾಗುವಂತಹ ಸ್ಥಿತಿ! ಇದರಿಂದ ಎರಡು ರೀತಿಯ ಫಲಿತಾಂಶ ಉಂಟಾಯಿತು. ಒಂದನೆಯದು ಮುಸ್ಲಿಮ್ ಲೋಕವೇ ಭಯೋತ್ಪಾದಕರೆಂಬ ಭಾವನೆ ಮೂಡುವಂತಾಯಿತು. ಎರಡನೆಯದೆಂದರೆ ಮುಸ್ಲಿಮ್ ಯುವಕರಲ್ಲಿ ಒಂದು ಅಲ್ಪಸಂಖ್ಯಾತ ವರ್ಗ ಈ ಮಾರ್ಗದಿಂದ ಮುಸ್ಲಿಮರ ಸಮಸ್ಯೆಗಳನ್ನು ಪರಿಹರಿಸಬಹುದೆಂದು ಯೋಚಿಸುವಂತಾಯಿತು. ಇದು ಅತ್ಯಂತ ಅಪಾಯಕಾರಿ ವಿಷಯವಾಗಿದೆ. ಪವಿತ್ರ ಕುರ್‌ಆನ್ ಮತ್ತು ಸುನ್ನತ್‌ಗಳ ವಾಹಕರಾದ ಮುಸ್ಲಿಮ್ ವಿದ್ವಾಂಸರ ಇಸ್ಲಾಮೀ ಆಶಯ ಪ್ರಚಾರದ ಪರಿಣಾಮವಾಗಿ ಹೆಚ್ಚಿನ ಯುವಕರು ಈ ದುರಾಲೋಚನೆಯ ಬಲೆಗೆ ಬೀಳಲಿಲ್ಲ. ಮುಸ್ಲಿಮ್ ಯುವಕರ ಪೈಕಿ ಬೆರಳೆಣಿಕೆಯ ಮಂದಿ ಮಾತ್ರ ಇಂತಹ ಚಟುವಟಿಕೆಗಳಲ್ಲಿ ನಿರತರಾಗಿದ್ದರೂ ಇದು ಇಸ್ಲಾಮಿನ ಆದರ್ಶವಲ್ಲ. ಇದರ ಹಿಂದಿರುವ ಮಿದುಳು ಯಹೂದಿಗಳದ್ದಾಗಿದೆಯೆಂಬುದು ಒಂದು ವಾಸ್ತವವಾಗಿದೆ. ಯಹೂದರ ತಂತ್ರ ಇಂದು ನಿನ್ನೆಯದಲ್ಲ. ಕಳೆದ ಹದಿನಾಲ್ಕು ಶತಮಾನಗಳಿಂದ ಅವರು ಇಸ್ಲಾಮಿನ ವಿರುದ್ಧ ಈ ತಂತ್ರವನ್ನು ಹೆಣೆದಿದ್ದಾರೆ. ಇಸ್ಲಾಮ್ ಇತರರ ಕತ್ತು ಕಡಿದು ಕೊಲ್ಲುವ ಧರ್ಮ, ಮಹಿಳೆಯರಿಗೆ ಯಾವುದೇ ಸ್ಥಾನಮಾನಗಳನ್ನು ನೀಡದ ಧರ್ಮ. ಮುಸ್ಲಿಮರಿಗೆ ಆಡಳಿತ ಸಿಕ್ಕಿದರೆ ಮುಸ್ಲಿಮೇತರರಿಗೆ ಬದುಕಲು ಬಿಡದ ಧರ್ಮ ಎಂಬಿತ್ಯಾದಿ ಅಪಪ್ರಚಾರಗಳನ್ನು ಹರಡಿ ಮುಸ್ಲಿಮೇತರರನ್ನು ಇಸ್ಲಾಮಿನ ವಿರುದ್ಧ ಮತ್ತು ಮುಸ್ಲಿಮರ ವಿರುದ್ಧ ಎತ್ತಿ ಕಟ್ಟುವ ಪ್ರಯತ್ನ ನಿರಂತರ ನಡೆಯುತ್ತಿದೆ. ಇಸ್ಲಾಮ್ ಭಯೋತ್ಪಾದನೆಯ ಧರ್ಮವೇ ಅಥವಾ ಶಾಂತಿಯ ಧರ್ಮವೇ ಎಂದು ತಿಳಿಯಬೇಕಿದ್ದರೆ ಅದರ ಪ್ರಮಾಣ ಗ್ರಂಥಗಳಾದ ಪವಿತ್ರ ಕುರ್‌ಆನ್ ಮತ್ತು ಸಹೀಹ್ ಹದೀಸ್‌ಗಳನ್ನು ನೋಡಬೇಕೇ ವಿನಾ ಅದರ ಅನುಯಾಯಿಗಳೆಂದು ಹೇಳಿಕೊಳ್ಳುವವರನ್ನಲ್ಲ. ●

# ಅತ್ತೌಹೀದ್ (ಏಕದೇವಾರಾಧನೆ)

ಲೇ: ಪಿ. ಅಬ್ದುಲ್ ಖಾದಿರ್ ಮೌಲವಿ
ಕನ್ನಡಕ್ಕೆ: ಇಸ್ಮಾಯೀಲ್ ಶಾಫಿ

(ಕಳೆದ ಸಂಚಿಕೆಯಿಂದ)

قُلْ مَن يَرْزُقُكُم مِّنَ السَّمَاءِ وَالأَرْضِ أَمَّن يَمْلِكُ السَّمْعَ والأَبْصَارَ وَمَن يُخْرِجُ الْحَيَّ مِنَ الْمَيِّتِ وَيُخْرِجُ الْمَيَّتَ مِنَ الْحَيِّ وَمَن يُدَبِّرُ الأَمْرَ فَسَيَقُولُونَ اللّهُ فَقُلْ أَفَلاَ تَتَّقُونَ (31)(يونس)

"(ಪ್ರವಾದಿಯವರೇ), ಕೇಳಿರಿ: ನಿಮಗೆ ಆಕಾಶದಿಂದಲೂ ಭೂಮಿಯಿಂದಲೂ ಜೀವನಾಧಾರ ನೀಡುತ್ತಿರುವವನು ಯಾರು? ಅಥವಾ ಶ್ರವಣ ಹಾಗೂ ದೃಷ್ಟಿಯನ್ನು ಅಧೀನಗೊಳಿಸುವವನು ಯಾರು? ನಿರ್ಜೀವ ವಸ್ತುವಿನಿಂದ ಜೀವಂತ ವಸ್ತುವನ್ನು ಹೊರ ತರುವವನು ಯಾರು? ಮತ್ತು ಸಕಲ ಕಾರ್ಯಗಳನ್ನು ನಿಯಂತ್ರಿಸುವವನು ಯಾರು? ತಕ್ಷಣ ಅವರು 'ಅಲ್ಲಾಹು' ಎಂದು ಹೇಳುವರು. ಆದುದರಿಂದ ಹೇಳಿರಿ: ನೀವು(ಅವನನ್ನು) ಭಯ ಪಡುವುದಿಲ್ಲವೇ?" (ಕುರ್‌ಆನ್ 10:31).

قُل لِّمَنِ الأَرْضُ وَمَن فِيهَا إِن كُنتُمْ تَعْلَمُونَ (84)سَيَقُولُونَ لِلَّهِ قُلْ أَفَلا تَذَكَّرُونَ (85)قُلْ مَن رَّبُّ السَّمَاوَاتِ السَّبْعِ وَرَبُّ الْعَرْشِ الْعَظِيمِ (86)سَيَقُولُونَ لِلَّهِ قُلْ أَفَلا تَتَّقُونَ (87)قُلْ مَن بِيَدِهِ مَلَكُوتُ كُلِّ شَيْءٍ وَهُوَ يُجِيرُ وَلا يُجَارُ عَلَيْهِ إِن كُنتُمْ تَعْلَمُونَ (88)سَيَقُولُونَ لِلَّهِ قُلْ فَأَنَّى تُسْحَرُونَ (89)

"(ಪ್ರವಾದಿಯವರೇ), ಕೇಳಿರಿ: ಭೂಮಿ ಮತ್ತು ಆಕಾಶದಲ್ಲಿರುವುದೆಲ್ಲಾ ಯಾರದು? ನಿಮಗೆ ತಿಳಿದಿದ್ದರೆ (ಹೇಳಿರಿ). ಅವರು 'ಅಲ್ಲಾಹನದು' ಎನ್ನುವರು. ಹಾಗಾದರೆ ನೀವು ಯೋಚಿಸುವುದಿಲ್ಲವೇ? ಎಂದು (ಅವರೊಡನೆ) ಕೇಳಿರಿ. ಸಪ್ತ ಗಗನಗಳ ಒಡೆಯ ಮತ್ತು ಅರ್ಶ್(ದಿವ್ಯ ಮಹಾಪೀಠ)ನ ಒಡೆಯ ಯಾರು? ಎಂದು ಕೇಳಿರಿ. (ಅದಕ್ಕೆ ) ಅವರು 'ಅಲ್ಲಾಹನೇ' ಎಂದು ಹೇಳುವರು. ಹಾಗಾದರೆ ನೀವು ಭಯ ಪಡುವುದಿಲ್ಲವೇ? ಎಂದು ಕೇಳಿರಿ. ಸಕಲ ವಸ್ತುಗಳ ಆಧಿಪತ್ಯವು ಅವನ ಕೈಯಲ್ಲಿದೆ. ಅವನು ರಕ್ಷಣೆ ನೀಡುತ್ತಾನೆ ಮತ್ತು ಅವನಿಗೆದುರಾಗಿ (ಯಾರಿಂದಲೂ) ರಕ್ಷಣೆ ನೀಡಲ್ಪಡುವುದಿಲ್ಲ. ಹೀಗಿರುವವನು ಯಾರು? ಎಂದು ಕೇಳಿರಿ. ನಿಮಗೆ ತಿಳಿದಿದ್ದರೆ(ಹೇಳಿರಿ). (ಆಗ) ಅವರು 'ಅಲ್ಲಾಹನೇ' ಎಂದು ಹೇಳುವರು. ಹಾಗಾದರೆ ನೀವು ಮೋಸಕ್ಕೊಳಗಾಗುವುದು ಹೇಗೆ? ಎಂದು ಕೇಳಿರಿ" (ಕುರ್‌ಆನ್ 23: 84-89).

ಇದಕ್ಕೆ ಪೂರಕವಾಗಿ ಇನ್ನೂ ಅನೇಕ ಸೂಕ್ತಗಳನ್ನು ತೋರಿಸಬಹುದಾಗಿದೆ. ಈ ಎಲ್ಲಾ ವಿಷಯಗಳನ್ನು ಬಹುದೇವಾರಾಧಕರು ಸಮ್ಮತಿಸುತ್ತಾರೆ ಮತ್ತು ಪ್ರವಾದಿ(ಸ)ರು ಯಾವ ತೌಹೀದ್‌ಗೆ ಅವರನ್ನು ಆಹ್ವಾನಿಸಿದ್ದರೋ ಅದರಲ್ಲಿ ಈ ವಿಷಯಗಳಿಗೆ ಸಂಬಂಧವಿಲ್ಲ ಎಂದು ಮೇಲೆ ಉಲ್ಲೇಖಿಸಿದ ದೇವ ವಚನಗಳಿಂದ ನಿನಗೆ ಮನವರಿಕೆಯಾಗಿದ್ದರೆ, ಅವರು ನಿಷೇಧಿಸಿದ ಏಕತ್ವವು ಆರಾಧನೆಯ ಕುರಿತಾದ ಏಕತ್ವವಾಗಿದೆಯೆಂದು ನಿನಗೆ ಸುಲಭದಲ್ಲಿ ತಿಳಿದುಕೊಳ್ಳಲು ಸಾಧ್ಯವಿದೆ. ಮಲಕ್‌ಗಳು ಅಲ್ಲಾಹನ ಬಳಿ ಅತ್ಯಂತ ನಿಕಟರಾಗಿರುವುದರಿಂದ ಅವರು ತಮಗೆ ಅಲ್ಲಾಹನಲ್ಲಿ ಶಿಫಾರಸು ಮಾಡುವರೆಂದು ಭಾವಿಸಿ ಬಹುದೇವಾರಾಧಕರು ಮಲಕ್‌ಗಳೊಂದಿಗೆ ಪ್ರಾರ್ಥಿಸಿದ್ದರು. ಅದೇ ರೀತಿ ಈಸಾ(ಅ)ರಂತಹ ಪ್ರವಾದಿಗಳೊಂದಿಗೆ ಮತ್ತು ಅವರಂತಿರುವ ಸತ್ಪುರುಷರೊಂದಿಗೂ ಪ್ರಾರ್ಥಿಸಿದ್ದರು. ಈ ರೀತಿಯ ಶಿರ್ಕ್‌ನ್ನು ವಿರೋಧಿಸಿದ ಪ್ರವಾದಿ ಮುಹಮ್ಮದ್(ಸ)ರು ಆರಾಧನೆಗಳನ್ನು ಅಲ್ಲಾಹನಿಗೆ ಮಾತ್ರ ಸಮರ್ಪಿಸಬೇಕೆಂಬ ತೌಹೀದ್‌ನೆಡೆಗೆ ಅವರನ್ನು ಆಹ್ವಾನಿಸಿ ದ್ದರೆಂಬುದನ್ನು ನೀನು ತಿಳಿಯಬೇಕಾಗಿದೆ. ಅಲ್ಲಾಹು ಹೇಳುತ್ತಾನೆ:

وَأَنَّ الْمَسَاجِدَ لِلَّهِ فَلا تَدْعُوا مَعَ اللَّهِ أَحَدًا (الجن:18)

"ನಿಶ್ಚಯವಾಗಿಯೂ ಎಲ್ಲಾ ಆರಾಧನಾ ಸ್ಥಳಗಳು ಅಲ್ಲಾಹನಿಗಾಗಿರುವಂತಹದಾಗಿದೆ. ಆದುದರಿಂದ ನೀನು ಅಲ್ಲಾಹನೊಂದಿಗೆ (ಬೇರೆ) ಯಾರಲ್ಲೂ ಪ್ರಾರ್ಥಿಸಬಾರದು" (ಕುರ್‌ಆನ್ 72: 16).

لَهُ دَعْوَةُ الْحَقِّ وَالَّذِينَ يَدْعُونَ مِن دُونِهِ لاَ يَسْتَجِيبُونَ لَهُم بِشَيْءٍ (الرّعد: 14)

"ನಿಜವಾದ ಪ್ರಾರ್ಥನೆ ಅವನೊಂದಿಗೇ (ಅವನೊಂದಿಗೆ ಮಾತ್ರ ಪ್ರಾರ್ಥಿಸಬೇಕು). ಅವನ ಹೊರತು ಇವರು ಪ್ರಾರ್ಥಿಸುತ್ತಿರುವವರು ಇವರಿಗೆ ಯಾವುದೇ ಉತ್ತರ ಕೊಡಲಾರರು" (ಕುರ್‌ಆನ್ 13:14).

ಆರಾಧನೆ, ಪ್ರಾರ್ಥನೆ, ಹರಕೆ, ಬಲಿ, ಸಹಾಯಾರ್ಥನೆಗಳೆಲ್ಲವನ್ನೂ ಅವರು ಅಲ್ಲಾಹನಿಗಾಗಿ ಮಾತ್ರ ಮಾಡಲಿಕ್ಕಾಗಿ ಪುಣ್ಯ ಪ್ರವಾದಿ(ಸ)ರು ಅವರೊಡನೆ ಹೋರಾಡಿದ್ದೆಂದು ನಿನಗೆ ಸ್ಪಷ್ಟವಾಯಿತಲ್ಲಾ. ಅಲ್ಲಾಹನ ಅಧಿಕಾರದಲ್ಲಿರುವ ಏಕತ್ವವನ್ನು ಅಂಗೀಕರಿಸಿದ ಮಾತ್ರಕ್ಕೆ ಅವರಿಗೆ ಇಸ್ಲಾಮಿನಲ್ಲಿ ಪ್ರವೇಶ ಸಿಗಲಿಲ್ಲವೆಂಬುದನ್ನು ಮತ್ತು ಔಲಿಯಾಗಳು, ಪ್ರವಾದಿಗಳು ಹಾಗೂ ಮಲಕ್‌ಗಳ ಶಿಫಾರಸನ್ನೂ ಆ ಮೂಲಕ ತಮಗೆ ಸಿಗಬಹುದೆಂದು ಅವರು ಭಾವಿಸಿದ್ದ ದೇವ ಸಾಮೀಪ್ಯದ ಕುರಿತಾದ ಅವರ ವಿಶ್ವಾಸವನ್ನು ಪ್ರವಾದಿ(ಸ)ರವರು ವಿರೋಧಿಸಿದ್ದೆಂಬುದನ್ನು ನೀನು ಅರ್ಥೈಸಿಕೊಂಡರೆ ದೇವ ಸಂದೇಶವಾಹಕರು ಜನರೊಡನೆ ಅಪೇಕ್ಷಿಸಿದ ಮತ್ತು ಬಹುದೇವಾರಾಧಕರು ನಿರಾಕರಿಸಿದ ತೌಹೀದ್ ಯಾವುದೆಂಬುದನ್ನು ನಿನಗೆ ಗ್ರಹಿಸಬಹುದಾಗಿದೆ. 'ಲಾ ಇಲಾಹ ಇಲ್ಲಲ್ಲಾಹ್' ಎಂಬುದರಲ್ಲಿ ಅಡಕವಾಗಿರುವ ಏಕತ್ವ ಇದುವೇ ಆಗಿದೆ. ಏನೆಂದರೆ ಮೇಲೆ ತಿಳಿಸಿದ ಆರಾಧನೆಗಳನ್ನು ಯಾರಿಗಾಗಿ ಸಮರ್ಪಿಸಲಾಗುತ್ತದೆಯೋ ಅದು ಮಲಕಾಗಿರಲಿ, ಪ್ರವಾದಿಯಾಗಿರಲಿ, ವಲಿ, ಕಬರ್, ಜಿನ್ನ್ ಯಾವುದೇ ಆಗಿರಲಿ ಅವರೆಲ್ಲರೂ ಇಲಾಹ್ ಅಥವಾ ಆರಾಧ್ಯರಾಗುತ್ತಾರೆ. ಇಲಾಹ್ ಎಂಬುದರಿಂದ ಸೃಷ್ಟಿಕರ್ತ, ಸಂರಕ್ಷಕ, ನಿಯಂತ್ರಕ ಎಂದೇನೂ ಅವರು ಉದ್ದೇಶಿಸಿರಲಿಲ್ಲ. ಈ ಎಲ್ಲಾ ಗುಣಗಳು ಏಕೈಕನಾದ ಅಲ್ಲಾಹನದಾಗಿದೆ ಎಂದು ಅವರೂ ತಿಳಿದಿದ್ದರು. ಈ ರೀತಿಯಲ್ಲಿ ತೌಹೀದ್‌ನ ಕಲಿಮವಾದ 'ಲಾ ಇಲಾಹ ಇಲ್ಲಲ್ಲಾಹ್' (ಅಲ್ಲಾಹನ ಹೊರತು ಬೇರೆ ಆರಾಧ್ಯನೇ ಇಲ್ಲ) ಎಂಬುದರೆಡೆಗೆ ಪ್ರವಾದಿ(ಸ)ರು ಅವರನ್ನು ಆಹ್ವಾನಿಸಿದ್ದರು. ಅದು ಕೇವಲ ಉಚ್ಚಾರವಲ್ಲ. ಅರ್ಥವನ್ನು ಮನಗಾಣುವುದೇ ಅದರ ಮುಖ್ಯ ಉದ್ದೇಶ. ಈ ಕಲಿಮದ ಅರ್ಥ ಅಲ್ಲಾಹನೇ ಆರಾಧನೆಗೆ ಅರ್ಹನು. ಅದರಲ್ಲಿ ಬೇರೆ ಯಾರಿಗೂ ಪಾಲಿಲ್ಲವೆಂದು ಅಜ್ಞಾನಿಗಳಾದ ಆ ವಿಗ್ರಹರಾಧಕರು ಕೂಡಾ ತಿಳಿದಿದ್ದರು. ಲಾ ಇಲಾಹ ಇಲ್ಲಲ್ಲಾಹ್ ಎಂದು ಹೇಳಲಿಕ್ಕಾಗಿ ಪ್ರವಾದಿ(ಸ)ರು ಅವರೊಡನೆ ಹೇಳಿದಾಗ

أَجَعَلَ الآلِهَةَ إِلَهًا وَاحِدًا إِنَّ هَذَا لَشَيْءٌ عُجَابٌ (ص : 5)

"ಇವನು ಹಲವು ದೇವರನ್ನು ಒಬ್ಬ ದೇವನಾಗಿ ಮಾಡಿದನೇ? ನಿಜವಾಗಿಯೂ ಇದೊಂದು ಅತ್ಯಾಶ್ಚರ್ಯಕರ ಸಂಗತಿಯಾಗಿದೆ" (ಕುರ್‌ಆನ್ 38:5) ಎಂದು ಅವರು ಪ್ರವಾದಿ(ಸ)ರಿಗೆ ಪ್ರತ್ಯುತ್ತರ ನೀಡಿದ್ದು ಪ್ರಸ್ತುತ ವಿಷಯವನ್ನು ಅವರು ಚೆನ್ನಾಗಿ ಮನವರಿಕೆ ಮಾಡಿಕೊಂಡದ್ದರಿಂದಾಗಿದೆ. ಆದರೆ ಅಜ್ಞಾನಿಗಳಾಗಿದ್ದ ಆ ಅರಬರು ಸಹ ತಿಳಿದಿದ್ದ ವಿಷಯಗಳು ಇಂದು ಮುಸ್ಲಿಮರೆಂದು ಹೇಳಿಕೊಳ್ಳುತ್ತಿರುವ ಕೆಲವರಿಗೆ ತಿಳಿಯದಿರುವುದು ನಿಜಕ್ಕೂ ಅದ್ಭುತವೇ.

إِنَّ اللَّهَ لاَ يَغْفِرُ أَن يُشْرَكَ بِهِ (النساء : 48)

"ಅಲ್ಲಾಹು ತನ್ನೊಂದಿಗೆ (ಇತರರನ್ನು) ಸಹಭಾಗಿಗಳಾಗಿ ಮಾಡುವುದನ್ನು ಖಂಡಿತ ಕ್ಷಮಿಸಲಾರ" (ಕುರ್‌ಆನ್ 4:48) ಎಂದು ಅಲ್ಲಾಹು ಹೇಳಿರುವ ಶಿರ್ಕ್‌ನ ಕುರಿತು ನೀನು ತಿಳಿದುಕೊಂಡರೆ ಮತ್ತು ಅಲ್ಲಾಹು ಯಾವ ಧರ್ಮದೊಂದಿಗೆ ಪ್ರವಾದಿಗಳನ್ನು ಕಳುಹಿಸಿದ್ದನೋ ಅದು ಈ ಧರ್ಮವಾಗಿದೆ. ಆದರೆ ಹೆಚ್ಚಿನವರು ಈ ಕುರಿತು ಅಜ್ಞರಾಗಿದ್ದಾರೆಂದು ನೀನು ತಿಳಿದುಕೊಂಡರೆ ಆ ಮೂಲಕ ನಿನಗೆ ಎರಡು ರೀತಿಯ ಉಪಕಾರಗಳು ಸಿಗಲಿವೆ. ಅವುಗಳಲ್ಲಿ ಒಂದೆಂದರೆ, ಅಲ್ಲಾಹನ ಕೃಪೆ ಹಾಗೂ ಅನುಗ್ರಹಗಳ ಸಂತೋಷವಾಗಿದೆ. ಅಲ್ಲಾಹು ಹೇಳುತ್ತಾನೆ:

قُلْ بِفَضْلِ اللَّهِ وَبِرَحْمَتِهِ فَبِذَلِكَ فَلْيَفْرَحُوا هُوَ خَيْرٌ مِّمَّا يَجْمَعُونَ (58)

"ಹೇಳಿರಿ: (ಅದು) ಅಲ್ಲಾಹನ ಅನುಗ್ರಹ ಮತ್ತು ಕೃಪೆಯಿಂದಾಗಿದೆ. ಆದುದರಿಂದ ಅವರು ಆಹ್ಲಾದಿಸಲಿ. ಅದು ಅವರು ಶೇಖರಿಸುತ್ತಿರುವುದಕ್ಕಿಂತ (ಎಷ್ಟೋ) ಉತ್ತಮವಾಗಿದೆ" (ಕುರ್‌ಆನ್ 10:58).

ಎರಡನೇ ಉಪಕಾರವೆಂದರೆ, ನಿನಗೆ ಬಹುದೊಡ್ಡ ಭಯವೊಂದು ಉಂಟಾಗಲಿದೆ ಎಂಬುದಾಗಿದೆ. ಅಜ್ಞತೆಯಿಂದಲೇ ಆಗಿದ್ದರೂ ಒಬ್ಬನ ಬಾಯಿಂದ ಕುಫ್ರ್‌ನ ಮಾತುಗಳು ಹೊರಟರೆ ಅದು ತನ್ನ ಅಜ್ಞತೆಯಿಂದ ಎಂಬ ನೆಪವನ್ನು ಪರಿಗಣಿಸಲಾಗದು. ಅವಿಶ್ವಾಸಿಗಳು ಮಾಡುತ್ತಿರುವ ಹಾಗೆ ಕೆಲವು ಸಂದರ್ಭಗಳಲ್ಲಿ ಹೀಗೆ ಹೇಳುವುದು ಒಳ್ಳೆಯ ವಿಷಯವಾಗಿದೆ ಯೆಂದು ಭಾವಿಸಿಯಾಗಿರಬಹುದು. ಈ ವಿಷಯದಲ್ಲಿ ನಿನಗೆ ಯಾವಾಗಲೂ ಭಯವಿರಬಹುದೆಂಬುದೇ ನಿನಗೆ ಲಭಿಸುವ ಎರಡನೇ ಪ್ರಯೋಜನ. ತಿಳಿಯಿರಿ! ಅಲ್ಲಾಹು ತನ್ನ ತೌಹೀದನ್ನು ಬೋಧನೆ ಮಾಡಲಿಕ್ಕಾಗಿ ಪ್ರವಾದಿಗಳನ್ನು ಕಳುಹಿಸುವಾಗ ಅವರಿಗೆ ಕೆಲವು ಶತ್ರುಗಳಿರಲೂಬಹುದೆಂಬುದು ಒಂದು ಪ್ರಾಕೃತಿಕ ನಿಯಮವಾಗಿದೆ. ಕುರ್‌ಆನ್ ಹೀಗೆ ಹೇಳುತ್ತದೆ:

وَكَذَلِكَ جَعَلْنَا لِكُلِّ نِبِيٍّ عَدُوًّا شَيَاطِينَ الإِنسِ وَالْجِنِّ يُوحِي بَعْضُهُمْ إِلَى بَعْضٍ زُخْرُفَ الْقَوْلِ غُرُورًا (انعام : 112)

"ಅದೇರೀತಿ ನಾವು ಎಲ್ಲಾ ಪ್ರವಾದಿಗಳಿಗೂ ಮಾನವರು ಮತ್ತು ಜಿನ್ನ್‌ಗಳ ಪೈಕಿ ಒಬ್ಬೊಬ್ಬ ಶೈತಾನರನ್ನು ಶತ್ರುಗಳಾಗಿ ಮಾಡಿರುತ್ತೇವೆ" (ಕುರ್‌ಆನ್ 6:112).

ಕೆಲವೊಮ್ಮೆ ತೌಹೀದ್‌ನ ಶತ್ರುಗಳ ಬಳಿ ಹಲವು ರೀತಿಯ ತಿಳುವಳಿಕೆಗಳು, ಗ್ರಂಥಗಳು ಮತ್ತು ಕುಟಿಲ ವಾದಗಳು ಇರಬಹುದು. ಅಲ್ಲಾಹು ಹೇಳುತ್ತಾನೆ:

(ಮುಂದಿನ ಪುಟಕ್ಕೆ)

# ಧಾರ್ಮಿಕ ಪ್ರಶ್ನೋತ್ತರಗಳು

## ಮೃತ ತಂದೆ-ತಾಯಿಗಳಿಗಾಗಿ ನಮಾಝ್ ನಿರ್ವಹಿಸಬಹುದೇ?

*ಪ್ರ: ತೀರಿಹೋದ ಹೆತ್ತವರಿಗಾಗಿ ದಾನ ಧರ್ಮ ಮಾಡುವಂತೆ ಅವರಿಗಾಗಿ ನಮಾಝ್ ನಿರ್ವಹಿಸಿ ಅದರ ಪ್ರತಿಫಲ ಹದ್‌ಯಾ ಮಾಡಬಹುದೇ? ಏನಿದರ ವಿಧಿ?*

ಉ: ಹೆತ್ತವರಿಗಾಗಿ ನಮಾಝ್ ನಿರ್ವಹಿಸುವುದಾಗಲೀ ಅದರ ಪ್ರತಿಫಲ ಹದ್‌ಯಾ ಮಾಡುವುದಾಗಲೀ ಧರ್ಮಬದ್ಧವಲ್ಲ. ಪ್ರಮಾಣಗಳಲ್ಲಿ ಅವರಿಗೋಸ್ಕರ ದಾನ ನೀಡುವಂತೆ ಹೇಳಿರುವುದರೊಂದಿಗೆ ನಮಾಝನ್ನು ಕಿಯಾಸ್(ತುಲನೆ) ಮಾಡುವುದು ಧರ್ಮಬದ್ಧವಲ್ಲ. ಮಯ್ಯಿತ್‌ಗಾಗಿ ಹದ್‌ಯಾ ನಮಾಝ್ ಮಾಡುವುದರ ಕುರಿತಾಗಲಿ ಅದರ ಪ್ರತಿಫಲ ಮೃತರಿಗೆ ಹದ್‌ಯಾ ಮಾಡುವುದರ ಕುರಿತಾಗಲಿ ಯಾವುದೇ ಪ್ರಾಮಾಣಿಕ ಆಧಾರವಿಲ್ಲ.

–ಫತಾವ ಲಜ್ನತುದ್ದಾಯಿಮ

## ಶಿರ್ಕ್ ಮಾಡುವವರಿಗೆ ಸಂಭಾವನೆ ನೀಡುವುದರ ವಿಧಿ?

*ಪ್ರ: ಶಿರ್ಕ್‌ನಂತಹ ಘೋರ ಅಪರಾಧಗಳಲ್ಲಿ ತೊಡಗಿ ಇಸ್ಲಾಮ್ ಧರ್ಮವನ್ನು ಜನರ ಮುಂದೆ ವಿಕಲವಾಗಿ ಪ್ರಚಾರ ಪಡಿಸುವ ಬಿದಈ ಪಂಗಡದವರು ಕೆಲವೊಮ್ಮೆ ಆರ್ಥಿಕ ಸಹಾಯಕ್ಕಾಗಿ ಮುಸ್ಲಿಮರ ಬಳಿ ಬರುವುದಿದೆ. ಅಂತಹವರಿಗೆ ನಾವು ನೆರವು(ಸಂಭಾವನೆ) ನೀಡಬಹುದೇ? ಇದು ಧರ್ಮಸಮ್ಮತವೇ?*

ಉ: ಶಿರ್ಕ್ ಮಾಡುವವರು ಮತ್ತು ಇಸ್ಲಾಮ್ ಧರ್ಮವನ್ನು ತಿರುಚಿ ಪ್ರಚುರಪಡಿಸುವ ಜನರು ಮುಸ್ಲಿಮ್ ಸಮುದಾಯದಿಂದ ಯಾವುದೇ ಆರ್ಥಿಕ ಸಹಾಯ ಪಡೆಯಲು ಅರ್ಹರಾಗುವುದಿಲ್ಲ. ಅಲ್ಲಾಹು ಪವಿತ್ರ ಕುರ್‌ಆನ್‌ನಲ್ಲಿ ಹೀಗೆ ಸ್ಪಷ್ಟ ಪಡಿಸಿದ್ದಾನೆ. "ನೀವು ಪುಣ್ಯ ಹಾಗೂ ಒಳಿತಿನ ವಿಚಾರದಲ್ಲಿ ಪರಸ್ಪರ ಸಹಾಯ ಮಾಡಿ. ಆದರೆ ಕೆಡುಕು ಮತ್ತು ಅತಿಕ್ರಮಣದಲ್ಲಿ ಸಹಾಯ ಮಾಡಬೇಡಿ" (5:2).

ಇದು ಕುರ್‌ಆನ್ ಈ ವಿಷಯಕ್ಕೆ ಸಂಬಂಧಿಸಿದಂತೆ ಸಾದರ ಪಡಿಸಿರುವ ಸತ್ಯ. ಕಾರಣ, ಇಸ್ಲಾಮ್ ವಿರೋಧಿ ಬಣಗಳಿಗೆ ನಾವು ನೀಡುವ ಆರ್ಥಿಕ ಅಥವಾ ನೈತಿಕ ನೆರವು ಪರೋಕ್ಷವಾಗಿ ನಾವು ಅವರೊಂದಿಗೆ ವಿಲೀನಗೊಳ್ಳುವುದರ ಸೂಚನೆಯಾಗಿರುತ್ತದೆ. ಆದರೆ (ಧರ್ಮದ ವಿಷಯವನ್ನು ಬದಿಗಿಟ್ಟು) ಮಾನವೀಯ ದೃಷ್ಟಿಯಿಂದ ಅವರಿಗೆ ನೆರವಾಗುವುದಾದರೆ ಅದನ್ನು ಆಕ್ಷೇಪಿಸುವಂತಿಲ್ಲ.

–ಶೈಖ್ ಮಹ್‌ಮೂದ್ ಅಹ್ಮದ್ ಕಾಶ್ಮೀರಿ

## ಗೊಂಬೆ ಮಾರಾಟ ಧರ್ಮಸಮ್ಮತವೇ?

*ಪ್ರ: ನಾನು ವಿವಿಧ ತರದ ಗೊಂಬೆಗಳನ್ನು ಮಾರಾಟ ಮಾಡುವ ಒಬ್ಬ ವ್ಯಾಪಾರಿ. ಈ ವ್ಯಾಪಾರ ಧರ್ಮಸಮ್ಮತವೇ?*

ಉ: ಮಕ್ಕಳಿಗೆ ಆಟವಾಡಲು ಉಪಯೋಗಿಸುವ ಗೊಂಬೆ(Doll, Puppet)ಗಳಾದರೆ ಅವುಗಳನ್ನು ಮಾರಾಟ ಮಾಡುವುದಕ್ಕೆ ವಿರೋಧವಿಲ್ಲ. ಆದರೆ ಮನೆಯಲ್ಲಿ ಅಲಂಕಾರ ಪ್ರದರ್ಶನಕ್ಕಿಡುವ ಗೊಂಬೆಗಳ ವ್ಯಾಪಾರ ಧರ್ಮಸಮ್ಮತವಲ್ಲ.

–ಡಾ। ಅಜೀಲ್ ನಶ್ಮಿ

## ಪತ್ನಿಯ ವೇತನದಲ್ಲಿ ಪತಿಗೆ ಹಕ್ಕಿದೆಯೇ?

*ಪ್ರ: ನನ್ನ ಪತ್ನಿ ಶಾಲೆಯೊಂದರಲ್ಲಿ ಅಧ್ಯಾಪಕಿಯಾಗಿ ಕೆಲಸ ಮಾಡುತ್ತಿದ್ದಾಳೆ. ನಮಗಾದರೋ ಸ್ವಂತ ಮನೆ ಇಲ್ಲ. ಮನೆ ನಿರ್ಮಿಸಲಿಕ್ಕಾಗಿ ನಾನು ಪತ್ನಿಯ ಹಣವನ್ನು ತೆಗೆದುಕೊಳ್ಳಬಹುದೇ?*

ಉ: ಮಹಿಳೆಯರಿಗೆ ಸ್ವಂತವಾದ ವ್ಯಕ್ತಿತ್ವ ಮತ್ತು ಆರ್ಥಿಕ ಪರಿಗಣನೆಯನ್ನು ಇಸ್ಲಾಮ್ ನಿಶ್ಚಯಿಸಿದೆ. ಆಕೆಯ ಅನುಮತಿ ಇಲ್ಲದೆ ಆಕೆಗೆ ಸೇರಿದ ಹಣಕಾಸಿನ ವ್ಯವಹಾರದಲ್ಲಿ ನೀವು ಹಸ್ತಕ್ಷೇಪ ಮಾಡುವಂತಿಲ್ಲ. ಒಂದು ವೇಳೆ ಆಕೆ ಸ್ವಇಚ್ಛೆಯಿಂದ(ತೃಪ್ತಿಯಿಂದ) ತನ್ನ ಹಣವನ್ನು ಗಂಡನಿಗೋ ಅವಳ ಹೆತ್ತವರಿಗೋ ನೀಡುವುದಾದರೆ ಅದನ್ನು ಸಂತೋಷಪೂರ್ವಕ ಸ್ವೀಕರಿಸಬಹುದು. ಪವಿತ್ರ ಕುರ್‌ಆನಿನಲ್ಲಿ ಅಲ್ಲಾಹು ಹೇಳುತ್ತಾನೆ: "ಅವರು ತಮ್ಮಿಷ್ಟ ಪ್ರಕಾರ ಅದರಿಂದ ನಿಮಗೆ ಏನನ್ನಾದರೂ ನೀಡಿದರೆ ನೀವು ಅದನ್ನು ಸಂತೋಷದಿಂದ ಅನುಭವಿಸಿಕೊಳ್ಳಿರಿ" (ನಿಸಾಅ್).

ಆದರೆ ಬಲವಂತದಿಂದ ಪತ್ನಿಯ ಸಂಪತ್ತನ್ನು ಪಡೆಯುವುದು ಧರ್ಮಬದ್ಧವಲ್ಲ. ಅದು ಅನ್ಯಾಯವಾಗಿ ಜನರ ಸಂಪತ್ತನ್ನು ತಿನ್ನುವ ಯಾದಿಗೆ ಸೇರಿದ್ದು. ಪತ್ನಿ ಸಂಪನ್ನೆ ಯಾಗಿದ್ದರೂ ಕೂಡಾ ಆಕೆಯ ಖರ್ಚುವೆಚ್ಚ ಮತ್ತಿತರ ಜೀವನಾವಶ್ಯಕತೆಗಳನ್ನು ಪೂರೈಸ ಬೇಕಾದುದು ಪತಿಯ ಕರ್ತವ್ಯವಾಗಿದೆ.

–ಶೈಖ್ ಅಬ್ದುಲ್ಲ ಬಿನ್ ಸುಲೈಮಾನ್ ಮುನೀಅ್

## 'ಇಸ್ತಿಹಾದತ್'ನ ಸಂದರ್ಭ ಪತ್ನಿಯೊಂದಿಗೆ ಸಂಭೋಗ ನಡೆಸಬಹುದೇ?

*ಪ್ರ: ಕೆಲವು ಮಹಿಳೆಯರಿಗೆ ಮುಟ್ಟಿನ ಸಾಮಾನ್ಯ ಅವಧಿಗೂ ಮೀರಿದ ರಕ್ತಸ್ರಾವ ಮುಂದುವರಿಯುವುದಿದೆ. ಇದು ಹೈದ್ ಅಥವಾ ಮುಟ್ಟು ಅಲ್ಲದ ಕಾರಣ ಈ ಸಮಯದಲ್ಲಿ ಪತಿ-ಪತ್ನಿಯರು ಲೈಂಗಿಕ ಕ್ರಿಯೆಯಲ್ಲಿ ತೊಡಗಬಹುದೇ?*

ಉ: "ಇಸ್ತಿಹಾದತ್ ಋತುಸ್ರಾವ ಅಲ್ಲದ ಕಾರಣ ಆ ಸಮಯವನ್ನು ಶುದ್ಧಿಯ ಅವಧಿಯಲ್ಲಿ ಮಹಿಳೆಯರಿಗೆ ಅನುಮತಿಸಲ್ಪಟ್ಟ ಯಾವೊಂದು ಕಾರ್ಯಗಳೂ ಇಸ್ತಿಹಾದತ್ ಅಥವಾ ರಕ್ತಸ್ರಾವ ಇರುವ ಕಾರಣದಿಂದ ನಿಷಿದ್ಧವಾಗಲಾರದು. ಆದರೆ ಆಕೆ ರೋಗಿ ಎಂಬ ಪರಿಗಣನೆ ಮತ್ತು ಸಂರಕ್ಷಣೆ ಅವಶ್ಯಕವಾಗಿದೆ. ಈ ಹಿನ್ನೆಲೆಯಲ್ಲಿ ರಕ್ತಸ್ರಾವವಿರುವ ಪತ್ನಿಯೊಂದಿಗೆ ಲೈಂಗಿಕ ಕ್ರಿಯೆ ನಡೆಸಬಹುದೇ? ಎಂಬುದರ ಕುರಿತು ಸಹಾಬಿಗಳ ವರೆಗಿನ ಪೂರ್ವಿಕ ವಿದ್ವಾಂಸರ ನಡುವೆ ಅಭಿಪ್ರಾಯ ಭಿನ್ನತೆಗಳಿವೆ. ಬೀವಿ ಆಯಿಶಾ(ರ) ಮತ್ತಿತರರು ಕೂಡದು ಎಂದು ಅಭಿಪ್ರಾಯ ಪಟ್ಟಿದ್ದಾರೆ. ಆದರೆ ಬಹುತೇಕ ವಿದ್ವಾಂಸರು ಈ ಅಭಿಪ್ರಾಯಕ್ಕೆ ಸಹಮತ ವ್ಯಕ್ತಪಡಿಸಿಲ್ಲ. ಕಾರಣ ಪವಿತ್ರ ಕುರ್‌ಆನಿನಲ್ಲಾಗಲೀ ಅಧಿಕೃತ ಹದೀಸ್‌ಗಳಲ್ಲಾಗಲೀ "ಇಸ್ತಿಹಾದತ್"ನ ಸಂದರ್ಭ ಮಿಲನ ಕ್ರಿಯೆ ಕೂಡದು ಎಂಬುದಕ್ಕೆ ಯಾವುದೇ ಪುರಾವೆ ಇಲ್ಲ. ಇಮಾಮ್ ನವವಿ ಹೇಳುತ್ತಾರೆ: "ಆದರೆ ನಮಾಝ್, ವ್ರತ, ಈತಿಕಾಫ್, ಕುರ್‌ಆನ್ ಪಾರಾಯಣ, ಮುಸ್‌ಹಫ್ ಸ್ಪರ್ಶ, ತಿಲಾವತ್‌ನ ಸುಜೂದ್, ಶುಕ್ರ್‌ನ ಸುಜೂದ್ ಮೊದಲಾದ ಎಲ್ಲಾ ಆರಾಧನೆಗಳಲ್ಲೂ ಶುದ್ಧಿ ಇರುವ ಇತರ ಮಹಿಳೆಯರ ವಿಧಿಯೇ ರೋಗ ರಕ್ತವಿರುವ ಮಹಿಳೆಯರಿಗೂ ಅನ್ವಯಿಸಲಿದೆ. ಇದು ಇಜ್ಮಾಅ್‌ನಿಂದ ಸ್ಥಿರಪಟ್ಟ ವಿಚಾರವಾಗಿದೆ. (ಶರ್‌ಹುಲ್ ಯುಹದ್ದಬ್)

### ತಿದ್ದುಪಡಿ

ಕಳೆದ ಸಂಚಿಕೆಯಲ್ಲಿ ಪ್ರಕಟಗೊಂಡ ಈ ಅಂಕಣದ ಪ್ರಥಮ ಪ್ರಶ್ನೆಯ ಉತ್ತರದಲ್ಲಿ ಮುಫ್ತಿಯ ಹೆಸರು "ಅಬ್ದುಲ್ ಜಿಬ್ರೀನ್" ಎಂದಾಗಿರುವುದನ್ನು "ಅಬ್ದುಲ್ಲ ಜಿಬ್ರೀನ್" ಎಂದು ತಿದ್ದಿ ಓದಬೇಕಾಗಿ ಕೋರಿಕೆ.

# ಅತ್ತೌಹೀದ್

(ಹಿಂದಿನ ಪುಟದಿಂದ)

فَلَمَّا جَاءَتْهُمْ رُسُلُهُمْ بِالْبَيِّنَاتِ فَرِحُوا بِمَا عِنْدَهُمْ مِنَ الْعِلْمِ (غافر : 83)

"ಅವರ ಸಂದೇಶವಾಹಕರು ಪ್ರಮಾಣಗಳ ಸಹಿತ ಅವರ ಬಳಿಗೆ ಬಂದಾಗ ಅವರು ತಮ್ಮಲ್ಲಿದ್ದ ಜ್ಞಾನದಿಂದಲೇ ತೃಪ್ತಿಗೊಂಡರು" (ಕುರ್‌ಆನ್ 40:83).

ಆದುದರಿಂದ ಅಲ್ಲಾಹನೆಡೆಗಿನ ನೇರ ಮಾರ್ಗದಲ್ಲಿ ಶತ್ರುಗಳಾದ ಪಂಡಿತರು, ವಾಚಾಳಿಗಳು ಮತ್ತು ಕುಟಿಲ ವಾದಿಗಳು ತಡೆಯಾಗಿ ಹೊಂಚು ಹಾಕುತ್ತಿದ್ದಾರೆಂದು ನೀನು ತಿಳಿದುಕೊಂಡರೆ ಆ ಶೈತಾನರೊಡನೆ ಹೋರಾಡಲು ಬೇಕಾದ ಆಯುಧಗಳನ್ನು ಅಲ್ಲಾಹನ ಗ್ರಂಥದಿಂದ ಗಳಿಸಬೇಕಾದುದು ನಿನ್ನ ಕರ್ತವ್ಯವಾಗಿದೆ. ಈ ಶೈತಾನರ ಮುಖಂಡನು ನಿನ್ನ ಪ್ರಭುವಿನೊಂದಿಗೆ ಹೇಳಿದ್ದು ಹೀಗೆ:

لَأَقْعُدَنَّ لَهُمْ صِرَاطَكَ الْمُسْتَقِيمَ (16) ثُمَّ لَآتِيَنَّهُمْ مِنْ بَيْنِ أَيْدِيهِمْ وَمِنْ خَلْفِهِمْ وَعَنْ أَيْمَانِهِمْ وَعَنْ شَمَائِلِهِمْ وَلَا تَجِدُ أَكْثَرَهُمْ شَاكِرِينَ (17)

"(ಇಬ್ಲೀಸನು ಹೇಳುತ್ತಾನೆ) ನೀನು ನನ್ನನ್ನು ಪಥಭ್ರಷ್ಟನಾಗಿ ಮಾಡಿರುವುದರಿಂದ ಖಂಡಿತವಾಗಿಯೂ ನಾನು ನಿನ್ನ ನೇರವಾದ ಮಾರ್ಗದಲ್ಲಿ ಅವರಿಗಾಗಿ ಕಾದಿರುವೆನು. ಬಳಿಕ ನಾನು ಅವರ ಮುಂದಿನಿಂದಲೂ ಅವರ ಹಿಂದಿನಿಂದಲೂ ಅವರ ಬಲಭಾಗದಿಂದಲೂ ಅವರ ಎಡಭಾಗದಿಂದಲೂ ಅವರ ಬಳಿಗೆ ಹೋಗುವೆನು ಮತ್ತು ಅವರಲ್ಲಿ ಹೆಚ್ಚಿನವರನ್ನು ಕೃತಜ್ಞತೆಯುಳ್ಳವರಾಗಿ ನೀನು ಕಾಣಲಾರೆ" (ಕುರ್‌ಆನ್ 7: 16, 17).

ಹಾಗಾಗಿ ನೀನು ಅಲ್ಲಾಹನೆಡೆಗೆ ತಿರುಗಿ ಅವನ ದೃಷ್ಟಾಂತಗಳನ್ನೂ ಆಧಾರ ಪ್ರಮಾಣಗಳನ್ನೂ ಗಮನಿಸಿದರೆ ನಿನಗೆ ಒಂದಿಷ್ಟೂ ಭಯ ಪಡಬೇಕಾಗಿಲ್ಲ.

إِنَّ كَيْدَ الشَّيْطَانِ كَانَ ضَعِيفًا (الفرقان : 33)

ನಿಶ್ಚಯವಾಗಿಯೂ ಶೈತಾನನ ಕುತಂತ್ರವು ದುರ್ಬಲವಾಗಿದೆ (ಅಲ್ ಫುರ್ಖಾನ್) ಎಂದು ಅಲ್ಲಾಹು ಹೇಳುತ್ತಾನೆ. ತೌಹೀದನ್ನು ಅಂಗೀಕರಿಸುವ ಒಬ್ಬ ಸಾಮಾನ್ಯ ವ್ಯಕ್ತಿಗೆ ಮಧ್ಯವರ್ತಿತನದಲ್ಲಿ ವಿಶ್ವಾಸವಿಡುವ ಸಾವಿರ ಪಂಡಿತರನ್ನು ಪರಾಭವಗೊಳಿಸಲು ಸಾಧ್ಯವಿದೆ. وَإِنَّ جُنْدَنَا لَهُمُ الْغَالِبُونَ (ನಮ್ಮ ಸೈನ್ಯವೇ ಜಯಿಸುವವರು) ಎಂದು ಅಲ್ಲಾಹು ಹೇಳುತ್ತಾನೆ. ಆದುದರಿಂದ ಅಲ್ಲಾಹನ ಪಕ್ಷದವರೇ ನ್ಯಾಯದಲ್ಲೂ ವಾಕ್ಸಾಮರ್ಥ್ಯದಲ್ಲೂ ಮಾತ್ರವಲ್ಲ, ಎಲ್ಲಾ ವಿಷಯಗಳಲ್ಲೂ ಯಶಸ್ವಿಯಾಗುವವರು. ಯಾವುದೇ ಆಯುಧ ಸಾಮಾಗ್ರಿಗಳಿಲ್ಲದೆ ಇವರನ್ನು ಎದುರಿಸಲು ಹೊರಡುವ ಒಬ್ಬ ಏಕದೇವ ವಿಶ್ವಾಸಿಯ ಕುರಿತು ಇವರಿಗೆ ಭಯ ಪಡಬೇಕಾದ ಸ್ಥಿತಿಯುಂಟಾಗುತ್ತದೆ. ಪರಮ ದಯಾಮಯನಾದ ಅಲ್ಲಾಹು ನಮಗೊಂದು ಗ್ರಂಥವನ್ನು ದಯಪಾಲಿಸಿ ನಮ್ಮ ಮೇಲೆ ತನ್ನ ಅನುಗ್ರಹವನ್ನು ಸುರಿದಿದ್ದಾನೆ. ಸರ್ವ ಕಾರ್ಯಗಳಿಗೂ ಆಧಾರವಾಗಿ, ಸತ್ಯ ಮಾರ್ಗವನ್ನು ತೋರಿಸಿ ಕೊಡುವ, ಮುಸ್ಲಿಮರಿಗೆ ಶುಭ ಸುದ್ದಿಯನ್ನು ನೀಡುವ ಅಮೂಲ್ಯ ಗ್ರಂಥವಾಗಿ ಅವನು ಅದನ್ನು ನಮಗೆ ಕೊಟ್ಟಿದ್ದಾನೆ. ಹಾಗಾಗಿ ಒಬ್ಬ ಅಸತ್ಯವಾದಿ ತೋರಿಸುವ ಸಮರ್ಥನೆಗಳನ್ನು ಪುಡಿಗುಟ್ಟಿ ಸತ್ಯವನ್ನು ಸಾಬೀತು ಪಡಿಸಲು ವಿಶುದ್ಧ ಕುರ್‌ಆನಿನಲ್ಲಿ ಸಾಕಷ್ಟು ಪುರಾವೆಗಳನ್ನು ಸಾದರ ಪಡಿಸಬಹುದಾಗಿದೆ.

(ಮುಂದುವರಿಯುವುದು)

# ಕಲ್‌ಬಾದ ಕೀಲಿಕೈ ಇಂದಿಗೂ ತಲ್ಹಾರವರ ಕುಟುಂಬದವರ ವಶದಲ್ಲಿ...!

ಅಲ್ಲಾಹು ಬಹಳ ಮುಖ್ಯವಾದ ಮನ ಮುಟ್ಟುವಂತಹ ಒಂದು ಘಟನೆಯನ್ನು ಅನಾವರಣ ಗೊಳಿಸಿರುವನು. ಮಕ್ಕಾ ವಿಜಯವಾದೊಡನೆ ಪ್ರವಾದಿ(ಸ)ರು ಮತ್ತು ಸಹಾಬಿಗಳು ಮಕ್ಕಾ ಮುಖರ್ರಮಕ್ಕೆ ಪ್ರವೇಶಿಸಿ ಕಲ್‌ಬಾದ ಕಡೆಗೆ ತೆರಳಿದರು. ಆದರೆ ಕಲ್‌ಬಾದ ಬಾಗಿಲು ಮುಚ್ಚಿ ಬೀಗ ಜಡಿಯಲಾಗಿತ್ತು. ಅದರ ಕೀಲಿಕೈ ಉಸ್ಮಾನ್ ಬಿನ್ ತಲ್ಹಾರ ಬಳಿಯಿತ್ತು. ಅವರು ಅಂದು ಮುಸ್ಲಿಮರಾಗಿರಲಿಲ್ಲ. ಹಾಗಾಗಿ ತಲ್ಹಾ ಕಲ್‌ಬಾಕ್ಕೆ ಬೀಗ ಜಡಿದು ಕಲ್‌ಬಾದ ಛಾವಣಿಯ ಮೇಲೆ ನಿಂತಿದ್ದರು. ಪ್ರವಾದಿ(ಸ)ರು ಮಕ್ಕಾಕ್ಕೆ ಆಗಮಿಸಿದ ವೇಳೆ ಬಹಳಷ್ಟು ಮಂದಿ ಇಸ್ಲಾಮನ್ನು ಸ್ವೀಕರಿಸಿದರು. ಕಲ್‌ಬಾದೊಳಗೆ ಪ್ರವೇಶಿಸಲಾಗದೆ ಪ್ರವಾದಿ(ಸ)ರು ಕೀಲಿಕೈ ಯಾರಲ್ಲಿದೆಯೆಂದು ಜನರೊಡನೆ ಕೇಳಿದಾಗ ಅದು ಉಸ್ಮಾನುಬ್‌ನು ತಲ್ಹಾ ಬಳಿಯಿದೆ ಯೆಂದು ಜನರು ಹೇಳಿದರು. ತಲ್ಹಾ ಕಲ್‌ಬಾದ ಛಾವಣಿಯ ಮೇಲೆ ನಿಂತಿದ್ದನ್ನು ಕಂಡ ಅಲಿ(ರ)ರವರು "ಓ ಉಸ್ಮಾನ್, ಕೀಲಿಕೈ ಕೊಡು, ಪ್ರವಾದಿ(ಸ)ರು ಕಾಯುತ್ತಿದ್ದಾರೆ" ಎಂದರು.

ಅದಕ್ಕೊಪ್ಪದ ಉಸ್ಮಾನುಬ್‌ನು ತಲ್‌ಹಾ "ಓ ಮಹಮ್ಮದ್, ನೀವು ಪ್ರವಾದಿಯೆಂದು ಒಂದುವೇಳೆ ನಾನು ವಿಶ್ವಾಸವಿಡುತ್ತಿದ್ದರೆ ಕಲ್‌ಬಾದ ಬಾಗಿಲನ್ನು ತೆರೆದು ಕೊಡುತ್ತಿದ್ದೆ" ಎಂದಾಗ ಕೋಪೋದ್ರಿಕ್ತರಾದ ಅಲಿ(ರ)ರವರು ತಲ್ಹಾರಿಂದ ಕೀಲಿಕೈಯನ್ನು ಕಿತ್ತುಕೊಂಡು ಕಲ್‌ಬಾದ ಬಾಗಿಲು ತೆರೆದರು. ಕಲ್‌ಬಾದೊಳಗೆ ಪ್ರವೇಶಿಸಿದ ಪ್ರವಾದಿ(ಸ)ರು ಎರಡು ರಕಅತ್ ನಮಾಝ್ ನಿರ್ವಹಿಸಿದರು. ಅಷ್ಟರಲ್ಲಿ ಅಲ್ಲೇ ಇದ್ದ ಪ್ರವಾದಿ(ಸ)ರ ಚಿಕ್ಕಪ್ಪ ಅಬ್ಬಾಸ್(ರ) ರವರು ಪ್ರವಾದಿ(ಸ)ರೊಂದಿಗೆ ಹೇಳಿದರು: "ನಿಮಗೆ ಗೊತ್ತಿದೆಯೇ, ನಮ್ಮ ಹಾಶಿಮ್ ಕುಟುಂಬವು ಹಿಂದಿನ ಕಾಲದಿಂದಲೇ ಕಲ್‌ಬಾದ ಮೇಲ್ನಿಚಾರಣೆ ನೋಡಿಕೊಳ್ಳುವುದು. ಹಜ್‌ಗೆ ಬರುವ ಹಾಜಿಗಳಿಗೆ ನೀರು ಒದಗಿಸಿ ಕೊಡುವುದು, ದಣಿದು ಬರುವವರ ಬಾಯಾರಿಕೆ ನೀಗಿಸುವುದು ಮುಂತಾದ ಕಾರ್ಯಗಳನ್ನು ನಿರ್ವಹಿಸುತ್ತಿದೆ. ಕಲ್‌ಬಾದ ಅಧಿಕಾರ ನಮ್ಮ ಕೈಯ್ಯಲ್ಲಿದೆ. ಆದ್ದರಿಂದ ಕೀಲಿಕೈಯನ್ನು



ನಮ್ಮಲ್ಲಿ ಕೊಡಿರಿ. ಇನ್ನು ಮುಂದೆಯೂ ಅದರ ಎಲ್ಲಾ ಜವಾಬ್ದಾರಿಯನ್ನು ನಾವೇ ನೋಡಿಕೊಳ್ಳುತ್ತೇವೆ.

ಅಷ್ಟರಲ್ಲಿ ಜಿಬ್ರೀಲ್(ಅ) ಈ ಕೆಳಗಿನ ದಿವ್ಯ ಸಂದೇಶ(ವಹ್ಯ್)ದೊಂದಿಗೆ ಕಲ್‌ಬಾದೊಳಗೆ ಪ್ರವೇಶಿಸುತ್ತಾರೆ.

إِنَّ اللَّهَ يَأْمُرُكُمْ أَنْ تُؤَدُّوا الْأَمَانَاتِ إِلَىٰ أَهْلِهَا وَإِذَا حَكَمْتُمْ بَيْنَ النَّاسِ أَنْ تَحْكُمُوا بِالْعَدْلِ ۚ إِنَّ اللَّهَ نِعِمَّا يَعِظُكُمْ بِهِ ۗ إِنَّ اللَّهَ كَانَ سَمِيعًا بَصِيرًا ﴿٥٨﴾

"ನಿಶ್ಚಯವಾಗಿಯೂ (ನಿಮ್ಮಲ್ಲಿ ಭರವಸೆಯಿಟ್ಟು ವಹಿಸಿ ಕೊಟ್ಟಿರುವ) ಅಮಾನತುಗಳನ್ನು ಅದರ ಜನರಿಗೆ (ಹಕ್ಕುದಾರರಿಗೆ) ಕೊಟ್ಟು ತೀರಿಸಬೇಕೆಂದೂ ನೀವು ಜನರೊಳಗೆ ತೀರ್ಪು ನೀಡುವಾಗ ನ್ಯಾಯಯುತವಾಗಿ ತೀರ್ಪು ನೀಡಬೇಕೆಂದೂ ಅಲ್ಲಾಹು ನಿಮ್ಮೊಡನೆ ಆಜ್ಞಾಪಿಸುತ್ತಾನೆ. ನಿಶ್ಚಯವಾಗಿಯೂ ಅಲ್ಲಾಹು ನಿಮಗೆ ಈ ಮೂಲಕ ಅತ್ಯುತ್ತಮ ಸದುಪದೇಶ ನೀಡುತ್ತಾನೆ. ಅಲ್ಲಾಹು ಖಂಡಿತ (ಎಲ್ಲವನ್ನೂ) ಆಲಿಸುವವನೂ ಕಾಣುವವನೂ ಆಗಿರುತ್ತಾನೆ" (ಕುರ್‌ಆನ್ 4:58).

ಇದು ಕಲ್‌ಬಾದೊಳಗೆ ಅವತೀರ್ಣಗೊಂಡ ಏಕಮಾತ್ರ ಆಯತ್ತಾಗಿದೆ. ಅಮಾನತು ಯಾರ ವಶದಲ್ಲಿತ್ತೋ ಅವರಿಗೇ ಹಿಂತಿರುಗಿಸಿರಿ ಎಂಬ ಅಲ್ಲಾಹನ ಆಜ್ಞೆ ಅವತೀರ್ಣಗೊಂಡೊಡನೆ ಪ್ರವಾದಿ(ಸ)ರವರು ಕಲ್‌ಬಾದ ಕೀಲಿಕೈಯನ್ನು ಉಸ್ಮಾನುಬ್‌ನು ತಲ್ಹಾರಿಗೆ ಹಿಂತಿರುಗಿಸುವಂತೆ ಸೂಚಿಸಿದರು. ಆಗ ಅಲಿ(ರ)ರವರು "ಓ ಉಸ್ಮಾನ್, ಇದು ನಿಮ್ಮ ಅಮಾನತಾಗಿದೆ. ಇದನ್ನು ನಿಮ್ಮಿಂದ ಕಿತ್ತುಕೊಂಡ ವಿಧಾನ ಸರಿಯಾಗಿಲ್ಲ. ಅದಕ್ಕಾಗಿ ತಮ್ಮಲ್ಲಿ ಕ್ಷಮೆ ಯಾಚಿಸುತ್ತೇನೆ" ಎಂದರು. ಅಲಿ(ರ)ರವರ ಸೌಜನ್ಯಪೂರ್ಣವಾದ ವರ್ತನೆಯನ್ನು ಕಂಡು ನಿಬ್ಬೆರಗಾದ ತಲ್ಹಾರವರು ಅಲಿ, ನೀವೇಕೆ ಇಷ್ಟು ವಿನಯಾನ್ವಿತರಾದಿರಿ. ನನ್ನಲ್ಲಿ ಒರಟಾಗಿ ವರ್ತಿಸಿ ಕೋಪೋದ್ರಿಕ್ತರಾಗಿ ನನ್ನಿಂದ ಕೀಲಿಕೈಯನ್ನು ಕಿತ್ತುಕೊಂಡು ಹೋದಿರಲ್ಲಾ. ಇದೇಕೆ ಈಗ ಇಷ್ಟೊಂದು ಸೌಜನ್ಯದಿಂದ ವರ್ತಿಸುತ್ತಿದ್ದೀರಿ?" ಎಂದು ಕೇಳಿದಾಗ ಅಲಿ(ರ)ರವರು ಹೇಳುತ್ತಾರೆ: "ವಲ್ಲಾಹಿ, ಓ ಉಸ್ಮಾನ್, ನಿಮ್ಮ ಕುರಿತಾಗಿ ಅಲ್ಲಾಹು ಕುರ್‌ಆನಿನ ಸೂಕ್ತವನ್ನು ಅವತೀರ್ಣಗೊಳಿಸಿದ್ದಾನೆ. ಈ ಕೀಲಿಕೈ ವಿಶ್ವಾಸ ವಿಟ್ಟವರ ಅಮಾನತಾಗಿದೆ. ಅದನ್ನು ಅವರಿಗೇ ಹಿಂತಿರುಗಿಸಿರಿ ಎಂದು ಅಲ್ಲಾಹು ಪ್ರವಾದಿ(ಸ)ರಿಗೆ ಆದೇಶ ಹೊರಡಿಸಿದ್ದಾನೆ. ಹಾಗಾಗಿ ಕೀಲಿಕೈಯನ್ನು ನಿಮಗೆ ಹಿಂತಿರುಗಿಸಿದ್ದೇನೆ". ಅಲಿ(ರ)ರವರ ಅನಿರೀಕ್ಷಿತ ಮಾತುಗಳನ್ನು ಕೇಳಿದ ಉಸ್ಮಾನುಬ್‌ನು ತಲ್ಹಾರವರು ಶಹಾದತ್ ಉಚ್ಚರಿಸಿ ತನ್ನ ಪರವಾಗಿ ಆಯತ್ತನ್ನು ಅವತೀರ್ಣಗೊಳಿಸಿದ ಅತ್ಯುನ್ನತನಾದ ಅಲ್ಲಾಹನ ದೀನನ್ನು ಅಂಗೀಕರಿಸಿ ಮುಸ್ಲಿಮರಾದರು (ಸುಬ್‌ಹಾನಲ್ಲಾಹ್). ಬಳಿಕ ಉಸ್ಮಾನುಬ್‌ನು ತಲ್ಹಾರವರು ಒಬ್ಬ ಪ್ರಸಿದ್ಧ ಸಹಾಬಿಯಾಗಿ ಅರಿಯಲ್ಪಟ್ಟರು.

ಪ್ರವಾದಿ(ಸ)ರು ಎದ್ದು ನಿಂತು "ಈ ಕೀಲಿಕೈ ಅಂತ್ಯ ದಿನದ ವರೆಗೂ ಉಸ್ಮಾನುಬ್‌ನು ತಲ್ಹಾ(ರ)ರವರ ಕುಟುಂಬ ಪರಂಪರೆಯವರ ವಶದಲ್ಲಿರುತ್ತದೆ" ಎಂದರು. ಪ್ರವಾದಿ(ಸ)ರವರ ಮಾತು ಇಂದಿಗೂ ಒಂದು ಜೀವಂತ ಉದಾಹರಣೆಯಾಗಿ ನೆಲೆನಿಂತಿದೆ.

ಪವಿತ್ರ ಕಲ್‌ಬಾದ ಕೀಲಿಕೈ ಇಂದು ಸಹ ಉಸ್ಮಾನುಬ್‌ನು ತಲ್ಹಾ(ರ)ರವರ ಕುಟುಂಬ ಪರಂಪರೆಯ ಪ್ರಮುಖರ ವಶದಲ್ಲಿರುವುದನ್ನು ಕಾಣಬಹುದಾಗಿದೆ. ಆ ಕುಟುಂಬಕ್ಕೆ ಪೊಲೀಸ್ ಹಾಗೂ ಸೌದಿ ರಾಜ ಮನೆತನದ ಕಾವಲಿದೆ. ಪವಿತ್ರ ಕುರ್‌ಆನಿನ ಅತಿಮಾನುಷಿಕತೆಗೆ ಕತೆಗೆ ಇದೊಂದು ಸ್ಪಷ್ಟ ಪುರಾವೆಯಾಗಿದೆ.

ಪ್ರವಾದಿ(ಸ)ರ ಚಿಕ್ಕಪ್ಪ ಕೀಲಿಕೈಗಾಗಿ ಅಪೇಕ್ಷಿಸಿದರೂ ಅವರ ಅಪೇಕ್ಷೆಯನ್ನು ತಿರಸ್ಕರಿಸಿ ಆ ಕೀಲಿಕೈಯನ್ನು ಅದರ ಹಕ್ಕುದಾರರಿಗೊಪ್ಪಿಸಲು ಆದೇಶಿಸಿದ ಇಸ್ಲಾಮಿನ ನ್ಯಾಯ ಪಾಲನೆ ಅದೆಷ್ಟು ಉತ್ಕೃಷ್ಟವಾದುದೆಂದು ಈ ಘಟನೆಯಿಂದ ತಿಳಿಯಬಹುದಾಗಿದೆ. ಅಲ್ಲಾಹು ಅಕ್ಬರ್.

## ಅನ್ಯ ಸ್ತ್ರೀಯೊಂದಿಗೆ ಒಂಟಿಯಾಗಿರುವುದು

ಜನರನ್ನು ಫಿತ್ನ್‌ಕ್ಕೊಳಪಡಿಸಲು ಮತ್ತು ಅವರನ್ನು ಹರಾಮ್‌ನಲ್ಲಿ ಬೀಳಿಸಲು ಶೈತಾನನು ಅತ್ಯಾಸಕ್ತಿ ತೋರಿಸುತ್ತಾನೆ. ಈ ಕಾರಣದಿಂದಲೇ ಅಲ್ಲಾಹು ನಮಗೆ ಎಚ್ಚರಿಕೆ ನೀಡಿದ್ದಾನೆ:

﴿ يَا أَيُّهَا الَّذِينَ آمَنُوا لَا تَتَّبِعُوا خُطُوَاتِ الشَّيْطَانِ ۚ وَمَنْ يَتَّبِعْ خُطُوَاتِ الشَّيْطَانِ فَإِنَّهُ يَأْمُرُ بِالْفَحْشَاءِ وَالْمُنْكَرِ ﴾

"ಓ ವಿಶ್ವಾಸಿಗಳೇ! ನೀವು ಶೈತಾನನ ಹೆಜ್ಜೆ ಗುರುತುಗಳನ್ನು ಅನುಸರಿಸ ಬೇಡಿರಿ. ಯಾರು ಶೈತಾನನ ಹೆಜ್ಜೆ ಗುರುತುಗಳನ್ನು ಅನುಸರಿಸುತ್ತಾನೋ ಅವನೊಂದಿಗೆ ಅವನು ಅಶ್ಲೀಲತೆ ಮತ್ತು ದುಷ್ಕೃತ್ಯಗಳನ್ನು ಮಾಡಲು ಆದೇಶಿಸುತ್ತಾನೆ" (24:21).

ಶೈತಾನನು ಮನುಷ್ಯ ದೇಹದಲ್ಲಿ ರಕ್ತ ಚಲಿಸುವಲ್ಲೆಲ್ಲಾ ಚಲಿಸುತ್ತಾನೆ. ಜನರನ್ನು ಅಶ್ಲೀಲತೆಗಳಲ್ಲಿ ಕೆಡವಲು ಶೈತಾನನು ಕಂಡು ಕೊಂಡ ದಾರಿಗಳ ಪೈಕಿ ಒಂದು ಅನ್ಯ ಸ್ತ್ರೀಯೊಂದಿಗೆ ಒಂಟಿಯಾಗಿರು ವುದಾಗಿದೆ. ಆದ್ದರಿಂದಲೇ ಶರೀಅತ್ ಈ ದಾರಿಯನ್ನು ಮುಚ್ಚಿ ಬಿಟ್ಟಿತು.

ಪ್ರವಾದಿ(ಸ)ರವರು ಹೇಳಿದರು:

«لَا يَخْلُوَنَّ رَجُلٌ بِامْرَأَةٍ إِلَّا كَانَ ثَالِثُهُمَا الشَّيْطَانُ»

ಖಂಡಿತವಾಗಿಯೂ ಒಬ್ಬ ಪುರುಷ ಒಬ್ಬಳು ಸ್ತ್ರೀಯೊಂದಿಗೆ ಒಂಟಿಯಾಗಿರಲಾರನು. ಅವರಿಬ್ಬರೊಂದಿಗೆ ಶೈತಾನನು ಮೂರನೆಯನಾಗಿರುವ ಹೊರತು. (ತಿರ್ಮುದಿ 3:474, ನೋಡಿ: ಮಿಶ್ಕಾತ್ 3118).

ಇಬ್ನ್ ಉಮರ್(ರ)ರಿಂದ ವರದಿ: ಪ್ರವಾದಿ(ಸ)ರವರು ಹೇಳಿದರು:

«لَا يَدْخُلَنَّ رَجُلٌ بَعْدَ يَوْمِي هَذَا عَلَى مَغِيبَةٍ إِلَّا وَمَعَهُ رَجُلٌ أَوْ اثْنَانِ»

"ನನ್ನ ಈ ದಿನದ ಬಳಿಕ ಒಬ್ಬ ವ್ಯಕ್ತಿ ಮನೆಯ ಯಜಮಾನನಿಲ್ಲದ ಸಂದರ್ಭದಲ್ಲಿ ಆತನ ಮನೆಯನ್ನು ಪ್ರವೇಶಿಸಕೂಡದು. ಅವನೊಂದಿಗೆ ಒಬ್ಬರು ಅಥವಾ ಇನ್ನಿಬ್ಬರಿರುವ ಹೊರತು" (ಮುಸ್ಲಿಮ್ 4:1711).

ಪತ್ನಿಯ ಸಹೋದರಿ ಅಥವಾ ಸೇವಕಿ ಮೊದಲಾದ ಅನ್ಯ ಸ್ತ್ರೀಯರೊಂದಿಗೆ ಮನೆಯಲ್ಲಾಗಲಿ, ಕೋಣೆಯಲ್ಲಾಗಲಿ ಅಥವಾ ವಾಹನದಲ್ಲಾಗಲಿ ಒಂಟಿಯಾಗಿರಕೂಡದು. ಹಾಗೆಯೇ ರೋಗಿಯಾಗಿರುವ ಸ್ತ್ರೀಯು ವೈದ್ಯನ ಬಳಿಗೆ ಒಂಟಿಯಾಗಿ ತೆರಳಕೂಡದು. ಜನರ ಪೈಕಿ ಹೆಚ್ಚಿನವರೂ ಇದನ್ನು ಕ್ಷುಲ್ಲಕವಾಗಿ ಪರಿಗಣಿಸುತ್ತಾರೆ. ಅವರು ಒಂದೋ ಸ್ವತಃ ತಮ್ಮ ಮೇಲೆ ಅಥವಾ ಇತರರ ಮೇಲೆ ಆತ್ಮವಿಶ್ವಾಸ ಹೊಂದಿರುತ್ತಾರೆ. ಇದು ಅಶ್ಲೀಲತೆಗಳೆಡೆಗೆ ಅಥವಾ ಅವುಗಳತ್ತ ಮುನ್ನಡೆಸುವ ಹಾದಿಗಳೆಡೆಗೆ ಕೊಂಡೊಯ್ಯುತ್ತವೆ. ತರುವಾಯ ಮಿಶ್ರ ತಲೆಮಾರು ಮತ್ತು ನಿಷಿದ್ಧ ಸಂತತಿಗಳ ಜನನ ಮೊದಲಾದ ದುರಂತಗಳಲ್ಲಿ ಕೊನೆಗೊಳ್ಳುತ್ತವೆ.

# ಹಿಂದೂ ಹಾಗೂ ಕ್ರೈಸ್ತ ಧರ್ಮ ಗ್ರಂಥಗಳಲ್ಲಿ ಪ್ರವಾದಿ ಮುಹಮ್ಮದ್(ಸ)

ಲೇ: ಎಂ.ಎಂ. ಅಕ್ಬರ್
ಕನ್ನಡಕ್ಕೆ: ಇಬ್ನು ಮೊಹಿದ್ದೀನ್

(ಕಳೆದ ಸಂಚಿಕೆಯಿಂದ)

**ಬಯಕೆಗಳ ಪೂರ್ತೀಕರಣ:**

ಮಾನವನು ಬಹಳಷ್ಟು ಬಯಕೆಗಳಿರುವವನಾಗಿದ್ದಾನೆ. ಆದರೆ ತನ್ನ ಬಯಕೆಗಳನ್ನೆಲ್ಲಾ ಈಡೇರಿಸಲು ಈ ಲೋಕಕ್ಕೆ ಸಾಧ್ಯವಿಲ್ಲವೆಂಬುದನ್ನರಿತಾಗ ಅವನು ನಿರಾಶನಾಗುತ್ತಾನೆ. ಪಾಮರರು, ಪಂಡಿತರು, ಧನಿಕರು, ದರಿದ್ರರು ಯಾರೂ ಇದರಿಂದ ಮುಕ್ತರಲ್ಲ. ನಾವು ಬಯಸುವ ಎಲ್ಲವನ್ನೂ ಪಡೆಯುವ ಒಂದು ವ್ಯವಸ್ಥೆ ಈ ಜಗತ್ತಿನಲ್ಲಿಲ್ಲವೆಂದು ತಿಳಿದುಕೊಳ್ಳುವ ಮಾನವನು ಅವುಗಳನ್ನು ಪಡೆಯಲು ಸಾಧ್ಯವೇ ಎಂದು ಅನ್ವೇಷಿಸುತ್ತಾನೆ. ಈ ಪ್ರಪಂಚದ ವ್ಯವಸ್ಥೆಗಳು ತನ್ನ ಇಚ್ಛೆಗಳನ್ನೆಲ್ಲಾ ಸಫಲೀಕರಿಸಲು ತಕ್ಕುದಾದ ರೀತಿಯಲ್ಲಿಲ್ಲವೆಂಬುದನ್ನರಿತ ಅವನು ಈ ಪ್ರಾಪಂಚಿಕ ಜೀವನಕ್ಕಿಂತ ವಿಭಿನ್ನವಾದ ಒಂದು ಜೀವನಕ್ಕಾಗಿ ಬಯಸುತ್ತಾನೆ.

**ಒಳಿತು ಮತ್ತು ಕೆಡುಕು:**

ಒಳಿತನ್ನು ಮಾಡಲು ಮಾನವನಲ್ಲಿ ಜನ್ಮತಃ ಒಂದು ವಾಸನೆಯಿದೆ. ಅವನು ಕೆಡುಕನ್ನು ದ್ವೇಷಿಸುತ್ತಾನೆ. ಆದರೆ ಒಳಿತೆಂದರೇನು? ಕೆಡುಕೆಂದರೇನು? ಎಂದು ಸ್ಪಷ್ಟವಾಗಿ ವಿವರಿಸಲು ಮಾನವನಿಗೆ ಸಾಧ್ಯವಾಗುವುದಿಲ್ಲ. ಇವನು ಕೆಡುಕೆಂದು ತಿಳಿದಿರುವ ಕಾರ್ಯಗಳನ್ನು ಅನುಭವಿಸುತ್ತಿರುವುದಾಗಿಯೂ ಒಳಿತನ್ನು ಮಾಡುವವರಲ್ಲಿ, ಅನೇಕರು ಕಷ್ಟ ಪಡುತ್ತಿರುವುದಾಗಿಯೂ ಕಾಣಲಾಗುತ್ತದೆ. ಒಳಿತು ಹಾಗೂ ಕೆಡುಕುಗಳಿಗೆ ತಕ್ಕುದಾದ ಪ್ರತಿಫಲವನ್ನು ನೀಡಲು ಲೋಕದ ವ್ಯವಸ್ಥೆಗೆ ಸಾಧ್ಯವಿಲ್ಲವೆಂಬುದನ್ನರಿತಾಗ ಅಂತಹ ಒಂದು ಪ್ರತಿಫಲದ ವೇದಿಕೆ ಅಗತ್ಯವಿದೆ ಎಂದು ಅವನಿಗೆ ತೋರುತ್ತದೆ. ಒಳಿತು ಹಾಗೂ ಕೆಡುಕುಗಳಿಗೆ ಸರಿಯಾದ ಕೂಲಿ ಕೊಡಲು ಯಾವುದೇ ಲೌಕಿಕ ನ್ಯಾಯಾಲಯಗಳಿಗೆ ಸಾಧ್ಯವಿಲ್ಲವೆಂದು ಮನವರಿಕೆಯಾದಾಗ ಪ್ರತಿಫಲದ ವೇದಿಕೆಯೊಂದರ ಬೇಡಿಕೆಯು ಮನುಷ್ಯಾಸ್ತಿತ್ವದ ಸ್ವಾಭಾವಿಕತವಾದ ಆಸಕ್ತಿಯಾಗಿದೆ. ಪರಲೋಕ ಮತ್ತು ಮರಣಾನಂತರ ಜೀವನ ಕಣ್ಣಿಗೆ ಕಾಣಿಸುತ್ತಿಲ್ಲವೆಂಬ ಕಾರಣಕ್ಕಾಗಿ ಮಾತ್ರ ನಿಷೇಧಿಸಿದ ಅನೇಕರು ಪರಲೋಕವೆಂಬುದೊಂದು ಇರುತ್ತಿದ್ದರೆ ಬಹಳ ಒಳ್ಳೆಯದಿತ್ತು. ಆದರೆ ಅದು ಇಲ್ಲವಲ್ಲಾ ಎಂದು ಹೇಳುವುದಿದೆ.

**ತಿಳಿಯುವುದು ಹೇಗೆ?**

ಮನುಷ್ಯ ಜಿಜ್ಞಾಸೆಯ ಮೂಲಭೂತ ಅನ್ವೇಷಣೆಗಳ ಕುರಿತಾಗಿ ನಾವು ಚರ್ಚಿಸಿದೆವು. ಸೃಷ್ಟಿಕರ್ತನ ಕುರಿತು ಆರಾಧ್ಯನ ಕುರಿತು ಮತ್ತು ಪ್ರತಿಫಲದ ದಿನದ ಕುರಿತು ಅವನು ಅನ್ವೇಷಣೆ ನಡೆಸುತ್ತಿದ್ದಾನೆ. ಈ ಪ್ರಶ್ನೆಗಳಿಗೆ ಸ್ಪಷ್ಟವಾದ ಉತ್ತರವನ್ನು ನೀಡಲು ತನ್ನ ಚಿಂತನಾಶಕ್ತಿ ಏನೇನೂ ಸಾಕಾಗದು ಎಂದು ಅವನು ಯೋಚಿಸುತ್ತಾನೆ.

ಸೃಷ್ಟಿಕರ್ತನ ಕುರಿತಾದ ಅನ್ವೇಷಣೆಯು ಅವನ ಅಸ್ತಿತ್ವವನ್ನು ಅಂಗೀಕರಿಸುವಲ್ಲಿಯ ತನಕ ಮಾತ್ರವೇ ತಲುಪಿಸಿದೆ. ಆರಾಧ್ಯನ ಕುರಿತಾದ ಅನ್ವೇಷಣೆಯು ಅವನ ಅನಿವಾರ್ಯತೆಯನ್ನು ಸ್ಪಷ್ಟಗೊಳಿಸುವುದನ್ನಷ್ಟೇ ಮಾಡಿದೆ. ಪ್ರತಿಫಲದ ವೇದಿಕೆಯ ಅನ್ವೇಷಣೆಯು ಅದು ಅಗತ್ಯವೆಂಬ ಅಭಿಪ್ರಾಯದ ತನಕ ಮಾತ್ರ ತಲುಪಿಸಿದೆ. ಯಾರು? ಎಲ್ಲಿ? ಮುಂತಾದ ಪ್ರಮುಖವಾದ ಕೆಲವು ಪ್ರಶ್ನೆಗಳ ಉತ್ತರಕ್ಕಾಗಿ ಮಾನವನು ಚರಿತ್ರಾತೀತ ಕಾಲದಿಂದಲೇ ಅನ್ವೇಷಿಸುತ್ತಿದ್ದಾನೆ. ಈ ಪ್ರಶ್ನೆಗಳ ಉತ್ತರವು ಲೌಕಿಕವಾದ ಪರೀಕ್ಷೆ, ಅವಲೋಕನಗಳಿಂದ ನಮಗೆ ಸಿಗಲಾರದು. ಸೃಷ್ಟಿಕರ್ತನ ಯಥಾರ್ಥ್ಯವನ್ನು ಯಾವುದಾದರೂ ಮೈಕ್ರೋ ಸ್ಕೋಪ್‌ನಲ್ಲಾಗಲಿ, ಆರಾಧ್ಯನ ಅಸ್ತಿತ್ವವನ್ನು ಟೆಸ್ಟ್ ಟ್ಯೂಬ್‌ನಲ್ಲಾಗಲಿ, ಪ್ರತಿಫಲನ ವೇದಿಕೆಯ ರೂಪವನ್ನು ಟೆಲಿಸ್ಕೋಪ್‌ನಲ್ಲಾಗಲಿ ನಮಗೆ ದರ್ಶಿಸಲು ಸಾಧ್ಯವಿಲ್ಲ. ಏಕೆಂದರೆ ಅವೆಲ್ಲಾ ಲೌಕಿಕ ಸಂಶೋಧನೆಗಳಿಗೆ ಅತೀತವಾಗಿದೆ. ಸೃಷ್ಟಿಕರ್ತ ಎಂದು ಹೇಳುವಾಗ ಸಕಲ ಪ್ರಪಂಚಗಳನ್ನು ಸೃಷ್ಟಿಸಿ ಸಂರಕ್ಷಿಸುತ್ತಿರುವವನು ಎಂದು ನಾವು ಅರ್ಥೈಸುತ್ತೇವೆ.

ಪ್ರಪಂಚ ಮತ್ತು ಪದಾರ್ಥಗಳನ್ನು ಸೃಷ್ಟಿಸಿದ ಅವನು ಪ್ರಪಂಚ ಹಾಗೂ ಪದಾರ್ಥಗಳಿಗೆ ಅತೀತನಾಗಿರಬಹುದೆಂದು ನಮ್ಮ ಸಾಮಾನ್ಯ ಬುದ್ಧಿಯೇ ಸಮರ್ಥಿಸುತ್ತದೆ. ಪದಾರ್ಥದ ವರ್ತನಾ ರೀತಿಯಾಗಿದೆ ಮನುಷ್ಯರ ಅಭಿಪ್ರಾಯ ಹಾಗೂ ಲಕ್ಷ್ಯಗಳ ವಿಷಯ. ಪದಾರ್ಥಾತೀತವಾದ ಯಾವುದಾದರೊಂದರ ಕುರಿತು ಸಂಕಲ್ಪಿಸಲಿಕ್ಕೂ ಸ್ಥಳ, ಕಾಲ, ನಿರಂತರತೆಗಳ ಸಂಬಂಧದಲ್ಲಿರುವ ಮನುಷ್ಯ ಬುದ್ಧಿಗೆ ಸಾಧ್ಯವಿಲ್ಲ. ಆದರೆ ಅಂತಹದೊಂದು ಅಸ್ತಿತ್ವವಿದೆ ಎಂದು ಅವನ ಮನಸ್ಸು ಅವನೊಡನೆ ಹೇಳುತ್ತಿರುತ್ತದೆ.

ಹಾಗಾಗಿ ಅಭಿಪ್ರಾಯ, ಅವಲೋಕನಗಳ ಮೂಲಕ ಸೃಷ್ಟಿಕರ್ತನ ಅಸ್ತಿತ್ವ ಹಾಗೂ ಸ್ವಭಾವಗಳ ಕುರಿತು ತಿಳಿಯಲು ಸಾಧ್ಯವಿಲ್ಲ. ಆರಾಧ್ಯ ಹಾಗೂ ಪ್ರತಿಫಲದ ದಿನದ ಕುರಿತಾದ ಅನ್ವೇಷಣೆಯ ಸ್ಥಿತಿಯೂ ಇದುವೇ. ಹಾಗಾದರೆ ಅವುಗಳ ಕುರಿತು ತಿಳಿಯುವ ದಾರಿ ಯಾವುದು? ಆ ದಾರಿಯನ್ನು ಸೃಷ್ಟಿಕರ್ತನೇ ನಮಗೆ ತಿಳಿಸಿ ಕೊಡಬೇಕು. ವಿನಾ ಅನ್ಯ ಮಾರ್ಗಗಳಿಲ್ಲ. ಅದು ಹೇಗೆ ಸಾಧ್ಯ? ಸ್ಥಳ ಹಾಗೂ ಕಾಲಗಳಿಗೆ ಅತೀತವಾದ ಸೃಷ್ಟಿಕರ್ತನು ಸ್ವಯಂ ಪ್ರತ್ಯಕ್ಷಗೊಂಡು ಈ ವಿಷಯಗಳನ್ನು ಹೇಳಿ ಕೊಡಲು ಮಾನವರ ಮಧ್ಯೆ ಬೆರೆತರೆ ಸ್ಥಳ, ಕಾಲಗಳ ಬಂಧನದಲ್ಲಿ ಸಿಲುಕಿರುವ ಮನುಷ್ಯನ ಮಸ್ತಿಷ್ಕಕ್ಕೆಂದು ಅದು ಹೊಕ್ಕಲಾರದು. ಸೃಷ್ಟಿಕರ್ತನಿಂದ ಬೇರೆ ಯಾವುದಾದರೂ ದಾರಿಯಾಗಿ ಆ ತಿಳುವಳಿಕೆ ಸಿಗಬೇಕು. ಮಾನವನಿಗೆ ಹಾಗೇನಾದರೂ ತಿಳುವಳಿಕೆ ಲಭಿಸಿದ್ದಿದೆಯೇ? ಸೃಷ್ಟಿಕರ್ತ, ಆರಾಧನೆ ಮತ್ತು ಪ್ರತಿಫಲದ ದಿನದ ಕುರಿತಾದ ಯಾವುದಾದರೂ ಬೋಧನೆ ಮಾನವ ರಾಶಿಗೆ ಅವತೀರ್ಣಗೊಂಡದ್ದಿದೆಯೇ?

**ದೇವದೂತರ ಸಂದೇಶ:**

ಸೃಷ್ಟಿಕರ್ತ, ಆರಾಧ್ಯ ಮತ್ತು ಪ್ರತಿಫಲದ ದಿನಗಳ ಕುರಿತು ನಿರಂತರ ಅನ್ವೇಷಣೆ ನಡೆಸುತ್ತಿರುವ ಮಾನವ ಸಮೂಹದ ಮುಂದೆ ವ್ಯಕ್ತಿಯೊಬ್ಬರು ಪ್ರತ್ಯಕ್ಷರಾಗಿ ಹೇಳುತ್ತಾರೆ.

"ನೀವು ತಿಳಿಯಲಿಚ್ಛಿಸುತ್ತಿರುವ ವಾಸ್ತವಿಕತೆಗಳ ಕುರಿತು ನನಗೆ ಜ್ಞಾನ ನೀಡಲಾಗಿದೆ. ಈ ಲೋಕವನ್ನು ಸೃಷ್ಟಿಸಿ ಸಂರಕ್ಷಿಸುತ್ತಿರುವ ದೇವನು ನನಗೆ ಆ ಜ್ಞಾನವನ್ನು ದಯಪಾಲಿಸಿದ್ದಾನೆ. ಸರ್ವ ಲೋಕಗಳ ಪ್ರಭುವಾದ ದೇವನನ್ನು ಮಾತ್ರವೇ ನೀನು ಆರಾಧಿಸಬೇಕು. ದೇವನ ವಿಧಿ-ನಿಷೇಧಗಳನ್ನು ಅನುಸರಿಸಿ ಜೀವಿಸುವುದೇ ಮಾನವ ಸಮುದಾಯದ ರಕ್ಷಾ ಮಾರ್ಗ. ಮಾನವನು ಮರಣ ಹೊಂದುವುದರೊಂದಿಗೆ ಅವನ ಜೀವನವು ಕೊನೆಗೊಳ್ಳುವುದಿಲ್ಲ. ಶಾಶ್ವತವಾದ ಒಂದು ಪರಲೋಕ ಜೀವನವು ಬರಲಿದೆ. ಸತ್ಯ ವಿಶ್ವಾಸಿಗಳ ಎಲ್ಲಾ ಬಯಕೆಗಳು, ಆಕಾಂಕ್ಷೆಗಳು, ನಿರೀಕ್ಷೆಗಳು ಮತ್ತು ಸಂಕಲ್ಪಗಳು ಸಾಕ್ಷಾತ್ಕಾರಗೊಳ್ಳುವುದು ಆ ಲೋಕದಲ್ಲಾಗಿದೆ. ಆ ವೇದಿಕೆಯಲ್ಲಿ ಒಳಿತು ಹಾಗೂ ಕೆಡುಕುಗಳಿಗೆ ತಕ್ಕುದಾದ ಪ್ರತಿಫಲ ನೀಡಲಾಗುತ್ತದೆ. ಆದುದರಿಂದ ದೇವನ ವಿಧಿ-ನಿಷೇಧಗಳನ್ನು ಅನುಸರಿಸಿ ಬದುಕಿ ಬರಲಿರುವ ಶಾಶ್ವತ ಸೌಭಾಗ್ಯವನ್ನು ಅನುಭವಿಸಲು ಸನ್ನದ್ಧರಾಗಿರಿ".

ಸಕಲ ದೇವದೂತರು ಹೇಳಿದ್ದು ಅದನ್ನೇ. ದೇವದೂತರ ಈ ವಚನಗಳು ನಿಜವೇ? ಅವುಗಳಲ್ಲಿ ನಾವು ವಿಶ್ವಾಸವಿಡಬೇಕೇ? ಒಂದು ವಿಷಯ ನಿಶ್ಚಿತ. ಮನುಷ್ಯ ಜಿಜ್ಞಾಸೆಯ ಸ್ವಾಭಾವಿಕ ಪ್ರಶ್ನೆಗಳಿಗೆ ಇದರ ಹೊರತು ಬೇರೆ ಉತ್ತರ ನೀಡಲಾಗಿಲ್ಲ. ಸೃಷ್ಟಿಕರ್ತನು ತಿಳಿಸಿಕೊಡುವುದರ ಹೊರತು ಈ ಪ್ರಶ್ನೆಗಳಿಗೆ ಉತ್ತರ ಕಂಡುಕೊಳ್ಳಲು ಬೇರೊಂದು ಮಾರ್ಗವಿಲ್ಲವೆಂದು ನಮಗೆಲ್ಲಾ ಗೊತ್ತಿದೆ. ಹಾಗಿರುವಾಗ ಈ ಉತ್ತರ ವಾಸ್ತವವೇ ಎಂದು ಪರಿಶೋಧಿಸಬೇಕಾದ ಬಾಧ್ಯತೆ ನಮಗಿಲ್ಲವೇ? ಖಂಡಿತಾ ಇದೆ.

(ಮುಂದುವರಿಯುವುದು)

# ಮಕ್ಕಳ ಮನಸ್ಸಲ್ಲಿ ಸದ್ಗುಣಗಳ ಬೀಜ ಬಿತ್ತಿರಿ

(2ನೇ ಪುಟದಿಂದ)

ಮಕ್ಕಳ ಮೇಲಿನ ವ್ಯಾಮೋಹ ಹೆತ್ತವರಲ್ಲಿ ಸಹಜ. ಹಾಗೆಂದು ಅವರನ್ನು ಬೆಳೆಸುವುದೂ ಕೂಡಾ ಹೆತ್ತವರ ಜವಾಬ್ದಾರಿ. ದುಬೈಯಲ್ಲಿ ನಾನು ನೋಡಿರುವ ಒಂದು ಸಾಮಾನ್ಯ ದೃಶ್ಯ. ಕೆಲ ಅಂಗಡಿಗಳ ಮುಂದೆ ಒಂದು ದಿರ್‌ಹಮ್ ನಾಣ್ಯ ಹಾಕಿದರೆ ಒಂದು ನಿಮಿಷ ಸಂಗೀತದೊಂದಿಗೆ ಅಲ್ಲಾಡುತ್ತಾ ಮಕ್ಕಳ ಮನರಂಜಿಸುವ ಕಾರುಗಳು ಅಥ'ವಾ ಪ್ರಾಣಿಗಳಂತಹ ಆಟಿಕೆಗಳಿರುತ್ತವೆ. ಅದನ್ನು ಕಂಡು ನನ್ನನ್ನೂ ಕೂರಿಸು ಎಂದು ಹಠ ಮಾಡದ ಮಕ್ಕಳೇ ಇಲ್ಲ ಎನ್ನಬಹುದು. ಒಂದು ಬಾರಿ ಕೂತರೆ ಮುಗಿಯಿತೇ? ಇಲ್ಲ. ಕೆಲ ಮಕ್ಕಳಂತೂ ಕಡೇ ಪಕ್ಷ ಐದು ಕಾಯಿನ್ ಆದರೂ ಹಾಕಿಸುತ್ತಾರೆ. ಇಲ್ಲ ಅಂದರೆ ಸಾಕು ಅಪ್ಪ ಅಮ್ಮ ಗದರುವಿಕೆಗೂ ಬಗ್ಗದೇ ನೆಲದಲ್ಲಿ ಬಿದ್ದು ಅತ್ತು ಹೊರಳಾಡಿ ತಮ್ಮ ಬೇಡಿಕೆಯನ್ನು ಈಡೇರಿಸಿಕೊಳ್ಳುತ್ತಾರೆ. ಇಂತಹ ವರ್ತನೆಗೆ ಹೆತ್ತವರೇ ಕಾರಣ. ಮಕ್ಕಳಿಗೆ ಹಣದ ಬೆಲೆ ತಿಳಿಸದೇ ಕೇಳಿದ್ದನ್ನೆಲ್ಲಾ ಕೊಟ್ಟು ಅಭ್ಯಾಸ ಮಾಡಿರುತ್ತಾರೆ. ಒಂದಲ್ಲಾ ಒಂದು ದಿನ ನಮ್ಮ ಈ ವರ್ತನೆಗೆ ನಾವೇ ಬೆಲೆ ತೆರಬೇಕಾಗುತ್ತದೆ ಎಂಬ ಕನಿಷ್ಠ ಜ್ಞಾನವನ್ನೂ ಕೂಡಾ ಹೊಂದದೆ ಮಕ್ಕಳ ಬೇಡಿಕೆಗಳನ್ನೆಲ್ಲಾ ಈಡೇರಿಸುತ್ತಾ ಹೋಗುತ್ತಾರೆ.

ಹೌದು ಮಕ್ಕಳು ಚಿಕ್ಕವರಿದ್ದಾಗ ಅವರ ಬೇಡಿಕೆಗಳು ಚಿಕ್ಕ ಮಟ್ಟದ್ದಾಗಿದ್ದು ಅದನ್ನು ಈಡೇರಿಸುವುದು ಅಂತಹ ಕಷ್ಟಸಾಧ್ಯ ಅನಿಸುವುದಿಲ್ಲ. ಆದರೆ ಬೆಳೆದಂತೆಲ್ಲಾ ಅವರ ಬೇಡಿಕೆಗಳು ದುಬಾರಿಯಾಗುತ್ತವೆ. ಆಗೆಲ್ಲಾ ಅದನ್ನು ಈಡೇರಿಸಲಾಗದಿದ್ದರೆ ಮಕ್ಕಳ ಮನದಲ್ಲಿ ಹೆತ್ತವರ ಬಗ್ಗೆ ದ್ವೇಷ ಹುಟ್ಟಬಹುದು. ಇವರೆಂತಹ ಹೆತ್ತವರು ಎಂಬ ತಿರಸ್ಕಾರವೂ ಉಂಟಾಗಬಹುದು ಅಥವಾ ಆ ಮಕ್ಕಳು ತಮ್ಮ ಇಷ್ಟಪೂರ್ತಿಯಾಗಿ ತಪ್ಪು ದಾರಿ ತುಳಿಯಬಹುದು. ಆಗ ಜೀವನವಿಡೀ ಕೊರಗಬೇಕಾಗುವುದು ಹೆತ್ತವರು.

(ಕೊನೆಯ ಪುಟಕ್ಕೆ)

ಧರ್ಮನಿಷ್ಠ ಖಲೀಫರು

# ಇಸ್ಲಾಮಿನ ಮೂರನೇ ಖಲೀಫ ಉಸ್ಮಾನ್‌ಬ್‌ನು ಅಫ್ಫಾನ್(ರ)

✍ ಅಹ್ಮದ್ ಅನ್ಸಾರ್,
ಮಂಗಳೂರು

(ಕಳೆದ ಸಂಚಿಕೆಯಿಂದ)

**ಅಂಟಾಲಿಯಾ ಮತ್ತು ಸೈಪ್ರಸ್‌ನ ವಿಜಯ:**

ಸಿರಿಯಾವನ್ನು ಮರು ಸ್ವಾಧೀನ ಪಡಿಸಲಿಕ್ಕಾಗಿ ರೋಮನ್ ಚಕ್ರವರ್ತಿ ಕೋನ್‌ಸ್ಟಾನ್ 2ನು ಮುಸ್ಲಿಮರ ಮೇಲೆ ಧಾಳಿ ಮಾಡಲು ತನ್ನ ಸೈನ್ಯದೊಂದಿಗೆ ಆಜ್ಞಾಪಿಸಿದನು. ರೋಮನ್‌ರ ಆಕ್ರಮಣದ ಸುದ್ದಿ ತಿಳಿದ ಅಮೀರ್ ಮುಆವಿಯ್ಯಾ(ರ)ರವರು ರೋಮನರ ಸೈನ್ಯ ಜಮಾವಣೆಗೊಂಡಿದ್ದ ಏಸ್ಯಾ ಮೈನರ್‌ಗೆ ಧಾಳಿಯಿಡುವಂತೆ ತನ್ನ ಸೈನ್ಯಕ್ಕೆ ಆದೇಶ ಕೊಟ್ಟರು. ಮುಸ್ಲಿಮ್ ಸೇನೆ ರೋಮನರನ್ನು ಸೋಲಿಸಿ ಅಮೂರಿಯಾ ನಗರವನ್ನು ವಶಪಡಿಸಿಕೊಂಡರು. ಕೆಲವೇ ಸಮಯದ ಅಂತರದಲ್ಲಿ ಮುಆವಿಯಾ(ರ)ರವರು ಏಸ್ಯಾಮೈನರ್‌ನ್ನು ವಶಪಡಿಸಿದರು. ಈ ವಿಜಯದ ಬಳಿಕ ಮುಆವಿಯ್ಯಾ(ರ)ರವರು ತನ್ನ ಗಮನವನ್ನು ಮೆಡಿಟರೇನಿಯನ್‌ನ ಕಡೆಗೆ ಹರಿಸಿದರು. ಭದ್ರತೆಯ ದೃಷ್ಟಿಯಿಂದ ಸೈಪ್ರಸ್ ದ್ವೀಪವು ಪ್ರಮುಖವಾಗಿತ್ತು. ಆದುದರಿಂದ ಸಮುದ್ರ ಯುದ್ಧಕ್ಕಾಗಿ ಅವರು ಉಸ್ಮಾನ್(ರ)ರವರ ಅಪ್ಪಣೆ ಕೇಳಿದರು. ಖಲೀಫರು ಒಪ್ಪಿದರು. ಇಸ್ಲಾಮಿನ ಇತಿಹಾಸದಲ್ಲೇ ಪ್ರಥಮವಾಗಿ ಹಿಜ್ರಾ 28ರಲ್ಲಿ ನೌಕಾದಳವನ್ನು ರಚಿಸಲಾಯಿತು. ಮುಆವಿಯ್ಯಾ(ರ)ರವರು ಅಬ್ದುಲ್ಲಾಹ್ ಬಿನ್ ಖೈಸ್‌ರವರ ನೇತೃತ್ವದಲ್ಲಿ ನೌಕಾದಳದ 500 ಹಡಗುಗಳನ್ನು ಕಳುಹಿಸಿಕೊಟ್ಟರು. ಬಳಿಕ ನಡೆದ ಯುದ್ಧದಲ್ಲಿ ಮುಸ್ಲಿಮ್ ಸೇನೆ ಸೈಪ್ರಸ್ ದ್ವೀಪವನ್ನು ವಶಪಡಿಸಿತು. ಆ ದ್ವೀಪದ ನಿವಾಸಿಗಳು ರೋಮನರಿಗೆ ಎಷ್ಟು ತೆರಿಗೆಯನ್ನು ಪಾವತಿಸುತ್ತಿದ್ದರೋ ಅಷ್ಟೇ ತೆರಿಗೆಯನ್ನು ಮುಸ್ಲಿಮರಿಗೆ ಪಾವತಿಸಲು ಒಪ್ಪಿದರು.

ಆ ಬಳಿಕ ಮುಆವಿಯ್ಯಾ(ರ)ರವರು ಹಿಜ್ರಾ 33(ಕ್ರಿ.ಶ. 653)ರಲ್ಲಿ ಅಂಟಾಲಿಯಾ (ಅನಟೋಲಿಯಾ ಎಂದು ಕರೆಯುತ್ತಿದ್ದರು) ಎಂಬ ಪ್ರಬಲವಾದ ಕೋಟೆಯನ್ನು ವಶಪಡಿಸಿದರು. ಆ ಮೇಲೆ ರೋಮನರ ರಾಜಧಾನಿಯಾಗಿದ್ದ ಕಾನ್‌ಸ್ಟೆಂಟಿನೋಪಲ್(ಈಗ ಇಸ್ತಾಂಬೂಲ್)ನ ಮೇಲೆ ಹಿಜ್ರಾ 34 (ಕ್ರಿ.ಶ. 654)ರಲ್ಲಿ ಧಾಳಿ ಮಾಡಿದರು. ಆದರೆ ಅದನ್ನು ವಶಪಡಿಸಲಾಗಲಿಲ್ಲ. (ಮತ್ತೆ ಆ ನಾಡನ್ನು ಹಿಜ್ರಾ 857 ಜುಮಾದಿಲ್ ಅವ್ವಲ್ 20ರಂದು ಸುಲ್ತಾನ್ ಮೊಹಮ್ಮದ್ ಫತಿಹ್‌ರವರು ವಶಪಡಿಸಿದರು).

**ಇರಾಕಿನ ಆಡಳಿತ:**

ಖಲೀಫಾ ಉಮರ್(ರ)ರವರ ಕಾಲದಲ್ಲಿ ಕೂಫಾದ ಗವರ್ನರ್ ಆಗಿ ಆಡಳಿತ ನಡೆಸುತ್ತಿದ್ದ ಸಅದ್(ರ)ರವರು ಇರಾಕಿನ ಗವರ್ನರ್ ಆಗಿದ್ದರು. ಅವರ ವಿರುದ್ಧ ಕೆಲವು ದೂರುಗಳು ಬಂದದ್ದರಿಂದ ಅವರನ್ನು ಮದೀನಾಕ್ಕೆ ಕರೆಸಿದ್ದರು. ಉಮರ್(ರ)ರವರು ಮರಣಶಯ್ಯೆಯಲ್ಲಿದ್ದಾಗ ಸಅದ್(ರ)ರವರನ್ನು ಪುನಃ ಇರಾಕಿನ ಗವರ್ನರ್ ಆಗಿ ನೇಮಿಸಲು ಇಚ್ಛಿಸಿದ್ದರು. ಅವರ ಇಚ್ಛೆಯನ್ನು ಉಸ್ಮಾನ್(ರ)ರವರು ನೆರವೇರಿಸಿದರು. ಆದರೆ ಸಅದ್ ಮತ್ತು ಇಬ್ನ್ ಮಸ್‌ಊದ್‌ರವರ ಮಧ್ಯೆ ಭಿನ್ನಾಭಿಪ್ರಾಯ ತಲೆದೋರಿತು. ಖಜಾನಾಧಿಕಾರಿಯಾಗಿದ್ದ ಇಬ್ನ್ ಮಸ್‌ಊದ್(ರ)ರವರು ಖಲೀಫರಿಗೆ ದೂರು ಕೊಟ್ಟರು. ಖಲೀಫರು ತನಿಖೆ ನಡೆಸಿದಾಗ ಸಅದ್‌ರಲ್ಲಿ ತಪ್ಪಿದೆಯೆಂದು ಕಂಡುಬಂದದ್ದರಿಂದ ಅವರನ್ನು ಗವರ್ನರ್ ಸ್ಥಾನದಿಂದ ವಜಾ ಗೊಳಿಸಲಾಯಿತು. ತೆರವಾದ ಗವರ್ನರ್ ಸ್ಥಾನಕ್ಕೆ ವಲೀದ್‌ಬ್‌ನು ಉಖ್‌ಬಾರನ್ನು ನೇಮಕಗೊಳಿಸಿ ಖಲೀಫರು ಆದೇಶವಿತ್ತರು. ದುರಾದೃಷ್ಟವಶಾತ್ ವಲೀದ್‌ಬ್‌ನು ಉಖ್‌ಬಾರವರು ಅಮಲು ಪದಾರ್ಥ ಸೇವಿಸಿದ ಅಪರಾಧದಲ್ಲಿ ಸಿಲುಕಿ ಗವರ್ನರ್ ಸ್ಥಾನವನ್ನು ಕಳೆದುಕೊಂಡರು. ಮಾತ್ರವಲ್ಲ, ತಾನೆಸಗಿದ ಅಪರಾಧಕ್ಕಾಗಿ ಇಸ್ಲಾಮಿನ ಶಿಕ್ಷಾನಿಯಮದನ್ವಯ ಚಾವಡಿ ಏಟಿನ ಶಿಕ್ಷೆಗೆ ಗುರಿಯಾದರು. ಕೆಲವು ಇತಿಹಾಸಕಾರರು ವಲೀದ್‌ಬ್‌ನು ಉಖ್‌ಬಾರನ್ನು ಕೆಲ ಪಿತೂರಿಕೋರರು ಅಪರಾಧದಲ್ಲಿ ಸಿಲುಕಿಸಿದ್ದೆಂದು ಅಭಿಪ್ರಾಯ ಪಟ್ಟಿದ್ದಾರೆ. ಆದರೆ ಅವರ ವಿರುದ್ಧ ಪ್ರಬಲ ಸಾಕ್ಷಿಯಿದ್ದುದರಿಂದ ಖಲೀಫರು ಅವರಿಗೆ ಚಾವಡಿ ಏಟಿನ ಶಿಕ್ಷೆ ಜಾರಿಗೊಳಿಸಿದರು. ತೆರವಾದ ಇರಾಕಿನ ಗವರ್ನರ್ ಸ್ಥಾನಕ್ಕೆ ಸಅದ್ ಬಿನ್ ಅಲ್ ಆಸ್‌ರನ್ನು ನೇಮಿಸಲಾಯಿತು.




ಹಿಜ್ರಾ 34ರಲ್ಲಿ ಫಿತ್ನಕೋರರ ಗುಂಪು ಗವರ್ನರರ ಮೇಲೆ ಪುನಃ ಪಿತೂರಿ ನಡೆಸಿದರು. ಖಲೀಫರಿಗೆ ಗವರ್ನರ್ ವಿರುದ್ಧ ಹಲವು ದೂರುಗಳು ಬಂದದ್ದರಿಂದ ಖಲೀಫಾ ಉಸ್ಮಾನ್(ರ)ರವರು ತಕ್ಷಣ ಅವರನ್ನು ಬದಲಿಸಿ ಅಬೂಮೂಸಲ್ ಅಶ್‌ಹರಿ(ರ)ರನ್ನು ಇರಾಕಿನ ನೂತನ ಗವರ್ನರ್ ಆಗಿ ನೇಮಕಗೊಳಿಸಿದರು.

**ಅಜರ್‌ಬೈಜಾನ್ ಮತ್ತು ಅರ್ಮೇನಿಯಾದ ದಂಗೆ:**

ಖಲೀಫಾ ಉಮರ್(ರ)ರವರ ಕಾಲದಲ್ಲಿ ಅಜರ್‌ಬೈಜಾನ್ ಮತ್ತು ಅರ್ಮೇನಿಯಾಗಳನ್ನು ವಶಪಡಿಸಲಾಗಿತ್ತು. ಅವರ ಮರಣಾನಂತರ ಇಸ್ಲಾಮಿ ರಾಜ್ಯದ ವಿರುದ್ಧ ಜನರು ದಂಗೆಯೆದ್ದರು. ದಂಗೆಯೆದ್ದ ಜನರನ್ನು ಸದೆಬಡಿಯುವಂತೆ ಅಂದು ಕೂಫಾದ ಗವರ್ನರ್ ಆಗಿದ್ದ ವಲೀದ್‌ಬ್‌ನು ಉಖ್‌ಬಾರೊಡನೆ ಖಲೀಫಾ ಉಸ್ಮಾನ್(ರ)ರವರು ಆಜ್ಞಾಪಿಸಿದರು. ಖಲೀಫರ ಆದೇಶ ಸಿಕ್ಕಿದಾಕ್ಷಣ ವಲೀದ್‌ಬ್‌ನು ಉಖ್‌ಬಾರವರು ಸೈನ್ಯವನ್ನು ಕಳುಹಿಸಿ ದಂಗೆಕೋರರನ್ನು ಸದೆಬಡಿದು ಆ ಪ್ರಾಂತ್ಯವನ್ನು ಮರುಸ್ವಾಧೀನ ಪಡಿಸಿದರು. ಇದು ಹಿಜ್ರಾ 26ರಲ್ಲಿ ನಡೆದ ಘಟನೆಯಾಗಿದೆ.

ಅದೇ ವೇಳೆ ಮುಆವಿಯ್ಯಾ(ರ)ರವರು ರೋಮನರನ್ನು ಎದುರಿಸಲಿಕ್ಕಾಗಿ ಹಬೀಬ್‌ನು ಮುಸ್ಲಿಮರವರ ನೇತೃತ್ವದ ಸೈನ್ಯವನ್ನು ಕಳುಹಿಸಿಕೊಟ್ಟರು. ಆ ಸೈನ್ಯವು ಹಲವು ಕೋಟೆಗಳ ಮೇಲೆ ದಾಳಿ ಮಾಡಿ ವಶಪಡಿಸಿಕೊಂಡಿತು. ಇದನ್ನು ಕಂಡು ರೊಚ್ಚಿಗೆದ್ದ ರೋಮನ್ ಚಕ್ರವರ್ತಿ ಕಾನ್‌ಸ್ಟೆಂಟ್-2ನು ಮುಸ್ಲಿಮರ ವಿರುದ್ಧ ಹೋರಾಡಲು 80 ಸಾವಿರ ಮಂದಿಯ ಬೃಹತ್ ಸೈನ್ಯವನ್ನು ಕಳುಹಿಸಿದನು. ರೋಮನರ ಬೃಹತ್ ಸೈನ್ಯವನ್ನು ಎದುರಿಸಲು ತಮ್ಮ ಸೇನೆಯನ್ನು ಬಲಪಡಿಸುವಂತೆ ಮುಆವಿಯ್ಯಾ(ರ)ರವರು ಖಲೀಫಾ ಉಸ್ಮಾನ್(ರ)ರವರಿಗೆ ಪತ್ರ ಬರೆದರು. ತಕ್ಷಣ ಖಲೀಫರು ಈ ಕುರಿತು ವಲೀದ್‌ಬ್‌ನು ಉಖ್‌ಬಾರವರಿಗೆ ಆದೇಶವಿತ್ತರು. ಅಜರ್‌ಬೈಜಾನ್‌ನನ್ನು ವಶಪಡಿಸಿ ಹಿಂತಿರುಗುತ್ತಿದ್ದ ವಲೀದ್‌ರವರಿಗೆ ಖಲೀಫರ ಪತ್ರ ಸಿಕ್ಕಿತು. ಕೂಡಲೇ ಸಲ್ಮಾನುಬ್‌ನು ರಬೀಅರವರ ನೇತೃತ್ವದಲ್ಲಿ 8 ಸಾವಿರ ಸೈನಿಕರನ್ನು ಅರ್ಮೇನಿಯಾಕ್ಕೆ ಕಳುಹಿಸಿದರು. ಉಭಯ ಸೇನಾ ಪಡೆಗಳ ನಡುವೆ ನಡೆದ ಭೀಕರ ಯುದ್ಧ ಸಂಪೂರ್ಣ ಅರ್ಮೇನಿಯಾವನ್ನು ಆವರಿಸಿತು. ಅರ್ಮೇನಿಯಾವನ್ನು ವಶ ಪಡಿಸಿದ ಮುಸ್ಲಿಮ್ ಸೇನೆ ಬಳಿಕ ಅರಾನ್ ಮತ್ತು ಗರ್ಜಸ್ತಾನ್‌ಗಳನ್ನೊಳಗೊಂಡ ಏಸಿಯಾ ಮೈನರ್‌ನ್ನು ಜಯಿಸಿದರು. ಹೀಗೆ ಹಿಜ್ರಾ 26ರ ಕೊನೆಯಲ್ಲಿ ಕೋಕಸಸ್ ಮೌಂಟನ್ಸ್ ಮುಸ್ಲಿಮ್ ಆಡಳಿತದ ಅಧೀನಕ್ಕೆ ಬಂತು.

**ಇರಾನಿನ ಆಡಳಿತ ಮತ್ತು ಅಫಘಾನಿಸ್ತಾನದ ಜಯ:**

ಇರಾನಿನ ಆಡಳಿತವು ಬಸ್ರಾದ ಗವರ್ನರ್‌ರ ಅಧೀನದಲ್ಲಿತ್ತು. ಉಮರ್(ರ)ರವರ ವಫಾತ್‌ನ ಸಮಯದಲ್ಲಿ ಅಬೂ ಮೂಸಲ್ ಅಶ್‌ಹರಿ(ರ)ರವರು ಬಸ್ರಾದ ಗವರ್ನರ್ ಆಗಿದ್ದರು.

ಅಬೂ ಮೂಸಲ್ ಅಶ್‌ಹರಿಯವರು ಕುರೈಶರ ಪರವಾಗಿದ್ದಾರೆಂಬ ಸುಳ್ಳು ಆಪಾದನೆ ಹೊರಿಸಿ ಬಸ್ರಾದ ಜನರು ಖಲೀಫರಿಗೆ ದೂರು ಕೊಟ್ಟರು. ಕೊನೆಗೆ ಖಲೀಫ ಉಸ್ಮಾನ್(ರ)ರವರು ಅಬೂಮೂಸಲ್ ಅಶ್‌ಹರಿಯವರನ್ನು ಮದೀನಕ್ಕೆ ಕರೆಸಿ ಅಬ್ದುಲ್ಲಾಹ್ ಬಿನ್ ಆಮಿರ್(ರ)ರನ್ನು ಬಸ್ರಾದ ಗವರ್ನರ್ ಆಗಿ ನೇಮಿಸಿದರು.

ಮೇಲೆ ವಿವರಿಸಿದಂತೆ ಉಮರ್(ರ)ರವರ ಕಾಲದಲ್ಲಿ ಪರ್ಷಿಯನ್ ಸಾಮ್ರಾಜ್ಯವನ್ನು ಸಂಪೂರ್ಣವಾಗಿ ಮುಸ್ಲಿಮರು ಗೆದ್ದಿದ್ದರು. ಆಗ ಚಕ್ರವರ್ತಿ ಯುರ್ಝ್‌ಗರ್ಡ್ ಬಾಲ್ಕ್(ಈಗ ಅಫಘಾನಿಸ್ತಾನದಲ್ಲಿದೆ)ಗೆ ಪಲಾಯನ ಗೈದಿದ್ದ. ಖಲೀಫ ಉಮರ್(ರ)ರವರ ಮರಣಾ ನಂತರ ಗಡೀಪಾರುಗೊಂಡಿದ್ದ ಚಕ್ರವರ್ತಿಗಳು ಇಸ್ಲಾಮೀ ರಾಜ್ಯದ ವಿರುದ್ಧ ದಂಗೆಯೇಳಲು ಗಡಿ ಪ್ರಾಂತ್ಯಗಳ ದಂಗೆಕೋರರನ್ನು ಹುರಿದುಂಬಿಸಿದನು. ದಂಗೆಕೋರರ ಹುಟ್ಟಡಗಿಸಲಿಕ್ಕಾಗಿ ಖಲೀಫಾ ಉಸ್ಮಾನ್(ರ)ರವರು ಉಬೈದುಲ್ಲಾಹ್ ಬಿನ್ ಮಮರ್‌ರವರನ್ನು ನೇಮಿಸಿದರು. ಆದರೆ ಅವರಿಂದ ನಿರೀಕ್ಷಿತ ಫಲಿತಾಂಶ ಸಿಗಲಿಲ್ಲ ಮತ್ತು ಅವರು ಹುತಾತ್ಮರಾದರು. ಅವರ ಸ್ಥಾನಕ್ಕೆ ಅಬ್ದುಲ್ಲಾಹ್ ಬಿನ್ ಆಮಿರ್‌ರನ್ನು ನೇಮಕಗೊಳಿಸಿ ದಂಗೆಕೋರರನ್ನು ಸದೆಬಡಿಯಲು ಖಲೀಫರು ಆದೇಶಿಸಿದ್ದರು. ಅಬ್ದುಲ್ಲಾಹ್ ಬಿನ್ ಆಮಿರ್(ರ)ರವರು ದಂಗೆಕೋರನನ್ನು ಸದೆಬಡಿದು ಹಿಸ್ರಫ್, ಗರಝ್ನಾ, ಹೇರತ್, ಕಾಬೂಲ್ ಮತ್ತು ಬಾಲ್ಕ್‌ನ್ನು ಗೆದ್ದುಕೊಂಡರು. ಹೀಗೆ ಅಫಘಾನಿಸ್ತಾನ ಸಂಪೂರ್ಣವಾಗಿ ಮುಸ್ಲಿಮರ ವಶವಾಯಿತು. ಆ ಬಳಿಕ ಅವರು ಸಮರ್‌ಕಂಡ್, ತಾಷ್ಕೆಂಟ್, ಸಜೆಸ್ತಾನ್, ಅರ್ಜಿಯಾನ್ ಮತ್ತು ತುರ್ಕ್‌ಮೆನಿಸ್ತಾನ್‌ಗಳನ್ನು ಸೇರಿಸಿಕೊಂಡರು.

**ಖುರಸ್ತಾನ್ ಮತ್ತು ತಬ್ರಸ್ತಾನ್‌ಗಳ ಜಯ:**

ಹಿಜ್ರಾ 30ರಲ್ಲಿ ಕೂಫಾದ ಹೊಸ ಗವರ್ನರ್ ಆಗಿ ನೇಮಕಗೊಂಡ ಸಅದ್‌ಬ್‌ನು ಆಸ್‌ರವರು ತನ್ನ ಸೇನಾ ಪಡೆಯನ್ನು ಖುರಸಾನ್‌ನ ಕಡೆಗೆ ಕೊಂಡೊಯ್ದರು. ಅದರಲ್ಲಿ ಆಫ್ರಿಕಾ ದಂಡ ಯಾತ್ರೆಯಿಂದ ಹಿಂತಿರುಗಿದ ಹಲವು ಪ್ರಮುಖರಿದ್ದರು.

(10ನೇ ಪುಟಕ್ಕೆ)

# ಜನಮನ್ನಣೆಗಾಗಿ ಮಾಡುವ ಸತ್ಕರ್ಮಗಳು ಅಲ್ಲಾಹನ ಬಳಿ ಸ್ವೀಕರಿಸಲ್ಪಡದು

ಮಸೀದಿಯಲ್ಲಿ ಗುಂಪುಗೂಡಿ ಕುಳಿತು ದಿಕ್ರ್ ಹೇಳಿ ಲೆಕ್ಕ ಹಾಕುತ್ತಿದ್ದ ಜನರ ಬಳಿಗೆ ವ್ಯಕ್ತಿಯೊಬ್ಬರು ಧಾವಿಸಿ ಬಂದು ಗಂಭೀರ ಧ್ವನಿಯಲ್ಲಿ ಹೀಗೆ ಹೇಳುತ್ತಾರೆ: "ನೀವೆಸಗಿದ ಪಾಪಗಳನ್ನು ಎಣಿಸಿ ನೋಡಿರಿ. ನಿಮ್ಮ ಯಾವುದೇ ಒಳಿತುಗಳು ನಷ್ಟವಾಗಲಿಕ್ಕಿಲ್ಲವೆಂದು ನಾನು ಭರವಸೆ ನೀಡುತ್ತೇನೆ. ಪ್ರವಾದಿ ಮುಹಮ್ಮದ್(ಸ)ರವರ ಸಮುದಾಯವೇ, ಎಷ್ಟು ಸುಲಭವಾಗಿ ನಿಮಗೆ ನಾಶ ಬಂದೊದಗಿತು! ಪ್ರವಾದಿ(ಸ)ರವರ ಅನುಚರರು ಇನ್ನೂ ಇಲ್ಲಿ ಜೀವಿಸಿದ್ದಾರೆ. ಪ್ರವಾದಿ(ಸ)ರವರು ಧರಿಸಿದ ವಸ್ತ್ರಗಳು ಹರಿದು ಹೋಗುವಷ್ಟು ಸಮಯವಾಗಲಿಲ್ಲ. ಅವರು(ಸ) ಉಪಯೋಗಿಸಿದ್ದ ಪಾತ್ರೆಗಳು ಒಡೆದು ಹೋಗಲಿಲ್ಲ. ಇಷ್ಟು ಬೇಗ ನೀವು ಆ ಮಹಾನ್ ಪ್ರವಾದಿ(ಸ)ರವರು ತೋರಿಸಿದ ಹಾದಿಯನ್ನು ಬಿಟ್ಟು ಸ್ವೇಚ್ಛೆಯಂತೆ ವರ್ತಿಸತೊಡಗಿದಿರಾ?"

ನಮಾಝ್‌ನ ವೇಳೆಗಾಗಿ ಕಾದು ಮಸೀದಿಯಲ್ಲಿ ಕುಳಿತಿದ್ದ ಸಮಯವನ್ನು ಸದುಪಯೋಗಪಡಿಸೋಣವೆಂದು ಭಾವಿಸಿ ಗುಂಪುಗೂಡಿ ಕುಳಿತು ದಿಕ್ರ್, ತಸ್‌ಬೀಹ್ ಹೇಳಿ ಲೆಕ್ಕ ಹಾಕುತ್ತಿದ್ದ ಜನರೊಡನೆ ಪ್ರಸಿದ್ಧ ಸಹಾಬಿವರ್ಯರಾದ ಅಬ್ದುಲ್ಲಾಹಿಬ್‌ನು ಮಸ್‌ಊದ್(ರ)ರವರು ಬಿದ್‌ಅತ್‌ನ ಕುರಿತಾಗಿ ತಾಕೀತು ಮಾಡಿ ಹೇಳಿದ ಮಾತುಗಳಾಗಿವೆ ಮೇಲೆ ಉಲ್ಲೇಖಿಸಿದ್ದು. ಸದುದ್ದೇಶಪೂರ್ವಕವಾದ ಕಾರ್ಯಗಳಾಗಿದ್ದರೂ ಸಹಾ ಪ್ರವಾದಿ(ಸ)ರವರ ಚರ್ಯೆಯಲ್ಲಿಲ್ಲದ ಆಚಾರಗಳನ್ನು ಅನುಷ್ಠಾನಕ್ಕೆ ತರುವುದು ಇಸ್ಲಾಮಿನ ದೃಷ್ಟಿಯಲ್ಲಿ ಧರ್ಮಬಾಹಿರವೆಂದು ಈ ಘಟನೆ ನಮ್ಮನ್ನು ಎಚ್ಚರಿಸುತ್ತದೆಯಲ್ಲದೆ, ತಾವೆಸಗುವ ಪಾಪಗಳನ್ನು ಲೆಕ್ಕ ಹಾಕುವುದರಿಂದ ಆತ್ಮಶುದ್ಧಿ ಮರಳಿ ಪಡೆಯಲು ಸಾಧ್ಯವಾಗುವುದೆಂಬ ಪಾಠವೂ ಇದರಲ್ಲಿ ಅಡಗಿದೆ.

ತಾವು ಮಾಡಿದ ಸತ್ಕರ್ಮಗಳನ್ನು ಎಣಿಕೆ ಹಾಕಿ ಜನರ ಮಧ್ಯೆ ಪ್ರಚಾರ ಮಾಡ ಬಯಸುವವರೇ ನಮ್ಮಲ್ಲಿ ಹೆಚ್ಚು. ಬಡವರಿಗೇನಾದರೂ ಸಹಾಯ ನೀಡಿದರೆ ಅದನ್ನು ಪ್ರಚುರ ಪಡಿಸಲು ಸಹಾಯ ನೀಡಿದ್ದಕ್ಕಿಂತ ಹೆಚ್ಚು ಖರ್ಚು ಮಾಡುವರಿದ್ದಾರೆ. ಸತ್ಕರ್ಮಗಳಿಗೆ ಅಲ್ಲಾಹನಿಂದ ಪ್ರತಿಫಲ ಸಿಗಬೇಕೆಂದು ಆಗ್ರಹಿಸುವ ಬದಲು ಜನಮನ್ನಣೆ ಗಿಟ್ಟಿಸಬೇಕೆಂಬ ದುರಾಭಿಲಾಷೆಯೇ ಇದಕ್ಕೆ ಪ್ರಧಾನ ಕಾರಣ. ಜನಮನ್ನಣೆಗಾಗಿ ಮಾಡುವ ಯಾವುದೇ ಸತ್ಕರ್ಮಗಳು ಅಲ್ಲಾಹನ ಬಳಿ ಸ್ವೀಕರಿಸಲ್ಪಡುವುದಿಲ್ಲ. ಮಾತ್ರವಲ್ಲ, ತಾನು ಬಹಳಷ್ಟು ಸತ್ಕಾರ್ಯ ಮಾಡುತ್ತಿದ್ದೇನೆಂಬ ಆತ್ಮ ಪ್ರಶಂಸೆ ಆತನನ್ನು ಅಹಂಕಾರಿಯನ್ನಾಗಿ ಮಾರ್ಪಡಿಸುತ್ತದೆ. ತಮಗೆ ತಿಳಿದಿರುವ ಸತ್ಕರ್ಮಗಳನ್ನು ಅನುಷ್ಠಿಸುವವರು ಕೆಲವೊಮ್ಮೆ ವಿನಾಶಕಾರಿಗಳಾಗುವುದು ಈ ಅಹಂಕಾರದಿಂದಾಗಿದೆ.

ತಾನು ಭಾರೀ ಸತ್ಕಾರ್ಯ ಮಾಡಿದನೆಂಬ ಅಹಂಭಾವ ತೋರುವ, ಪ್ರಸಿದ್ಧಿಗಾಗಿಯೂ ಅಧಿಕಾರ ಗಿಟ್ಟಿಸುವುದಕ್ಕಾಗಿಯೂ ಸತ್ಕರ್ಮಗೈಯ್ಯುವ ಮತ್ತು ವಾಗ್ದಾನ ನೀಡಿ ವಂಚಿಸುವ ಕಪಟಿಗಳನ್ನು ಅಲ್ಲಾಹು ಮೆಚ್ಚುವುದಿಲ್ಲ. ಅವರು ಅಲ್ಲಾಹನ ಪ್ರತಿಫಲ ಪಡೆಯುವ ಬದಲು ಅಲ್ಲಾಹನ ಕ್ರೋಧಕ್ಕೀಡಾಗಿ ವಿನಾಶಕಾರಿಗಳಾಗಿ ಮಾರ್ಪಡುವರು. ಅವರಿಗೆ ಯಾವ ಸದುಪದೇಶಗಳೂ ಫಲ ಕೊಡುವುದಿಲ್ಲ. ಕಾರಣ ತಮಗೆಲ್ಲಾ ಗೊತ್ತಿದೆ. ತಾನು ಹೇಳಿದ್ದೇ ಸರಿ, ತನಗೆ ಯಾರೂ ಹೇಳಿ ಕೊಡಬೇಕಾಗಿಲ್ಲ ಎಂಬ ದುರಹಂಕಾರ ಅವರನ್ನು ದಾರಿಗೆಡಿಸುತ್ತದೆ. ಸಾಮೂಹಿಕ ಹಿತಾಸಕ್ತಿಯನ್ನು ಕಡೆಗಣಿಸಿ, ವ್ಯಕ್ತಿಪ್ರತಿಷ್ಠೆ ಬೆಳೆಸುವ ಮಂದಿಯ ಪ್ರೇರಕ ಶಕ್ತಿ ಇದೇ ಆಗಿದೆ. ಈ ಮಂದಿಗೆ ಪಶ್ಚಾತ್ತಾಪ ಪ್ರಜ್ಞೆ ಉಂಟಾಗುವುದು ಪ್ರಯಾಸಕರ.

ಸತ್ಯವಿಶ್ವಾಸಿಗಳಿಗೆ ಅಗತ್ಯವಾಗಿ ಬೇಕಾಗಿರುವುದು ಪಶ್ಚಾತ್ತಾಪ ಪ್ರಜ್ಞೆಯಾಗಿದೆ. ವಿನಯಶೀಲರಿಗೆ ಪ್ರಜ್ಞೆ ಉಂಟಾದೀತು. ತನ್ನಿಂದೇನಾದರೂ ದೋಷ ಸಂಭವಿಸಬಹುದೇ ಎಂಬ ಚಿಂತೆ ಯಾವಾಗಲೂ ನಮ್ಮಲ್ಲಿರಬೇಕು. ತಾನು ಎಲ್ಲವನ್ನೂ ತಿಳಿದವನು ಎಂಬ ಅಹಂಭಾವವಿರಬಾರದು. ಅದಾಗಿತ್ತು ಪೂರ್ವಿಕರ ಮಾರ್ಗ. ಮೇಲೆ ಉಲ್ಲೇಖಿಸಿದ ಘಟನೆಯಲ್ಲಿ ಅಬ್ದುಲ್ಲಾಹಿಬ್‌ನು ಮಸ್‌ಊದ್(ರ)ರವರು ಹೇಳಿದ್ದು ಇದೇ ವಿಷಯವಾಗಿದೆ.

ನಾವು ಮಾಡುವ ಸತ್ಕರ್ಮಗಳ ಲೆಕ್ಕ ಕೂಡಿಸಿ ಯಾರ ಮುಂದೆಯೂ ಹೇಳಬೇಕಾದ ಅಗತ್ಯವಿಲ್ಲ. ಯಾರ ಪ್ರಶಂಸೆಯನ್ನೂ ಆಶಿಸಬೇಕಾಗಿಲ್ಲ. ಅದನ್ನು ಅಲ್ಲಾಹು ಎಣಿಸುತ್ತಾನೆ. ಅದರ ಪ್ರತಿಫಲವನ್ನು ಅವನೇ ಕೊಡುತ್ತಾನೆ. ಆದರೆ ನಾವೆಸಗುವ ಪಾಪಗಳ ಎಣಿಕೆಯ ಕುರಿತು ಪ್ರತಿಯೊಬ್ಬರೂ ಸ್ವಯಂ ಚಿಂತಿತರಾಗಬೇಕು. ಈ ಚಿಂತೆ ಅಹಂಕಾರವನ್ನು ನಾಶಗೊಳಿಸುತ್ತದೆ. ಪಶ್ಚಾತ್ತಾಪದ ಯೋಚನೆ ಮೂಡಿಸುತ್ತದೆ, ಕ್ರಮೇಣ ಆತ್ಮಶುದ್ಧಿ ಕೈಗೊಳ್ಳಲು ಸಾಧ್ಯವಾಗುತ್ತದೆ. ಮನುಷ್ಯನನ್ನು ವಿನಯಶೀಲನಾಗಿಯೂ ಸತ್ಯವಿಶ್ವಾಸಿಯಾಗಿಯೂ ಮಾಡುತ್ತದೆ.

✍ ಡಾ। ಕು। ಕಮರುನ್ನಿಸಾ, ಕೋಣಾಜೆ

# ಧರ್ಮನಿಷ್ಠ ಖಲೀಫರು

(9ನೇ ಪುಟದಿಂದ)

ಅವರೊಂದಿಗೆ ಹಸನ್, ಹುಸೈನ್, ಅಬ್ದುಲ್ಲಾಹ್ ಬಿನ್ ಅಬ್ಬಾಸ್ ಮತ್ತು ಅಬ್ದುಲ್ಲಾಹ್ ಬಿನ್ ಉಮರ್(ರ)ರವರು ಕೂಡಿಕೊಂಡರು. ಅದೇ ವೇಳೆ ಬಸ್ರಾದ ಗವರ್ನರ್ ಅಬ್ದುಲ್ಲಾ ಬಿನ್ ಆಮಿರ್‌ರವರು ತನ್ನ ಸೈನ್ಯದೊಂದಿಗೆ ಅಲ್ಲಿಗೆ ತಲುಪಿದರು. ಆಮಿರ್‌ರವರು ಅಲ್ಲಿಗೆ ತಲುಪುವುದಕ್ಕಿಂತ ಮೊದಲೇ ಸಅದ್‌ಬ್‌ನು ಆಸ್‌ರ ವರು ಹಲವು ಪ್ರದೇಶಗಳನ್ನು ವಶಪಡಿಸಿ ಕೊಂಡಿದ್ದರು. ಅದರಲ್ಲಿ ತಬ್ರಿಸ್ತಾನ್ ಮತ್ತು ಜರ್ಜಾನ್‌ಗಳು ಸೇರಿದ್ದವು. ಹಿಜ್ರಾ 31ರಲ್ಲಿ ಜನ ದಂಗೆಯೆದ್ದರೆಂಬ ಸುದ್ದಿ ತಿಳಿದ ಅಬ್ದುಲ್ಲಾಹ್ ಬಿನ್ ಆಮಿರ್(ರ)ರವರು ಸೈನ್ಯದೊಂದಿಗೆ ಧಾವಿಸಿ ಉಳಿದಿದ್ದ ಪ್ರದೇಶಗಳನ್ನೂ ಸ್ವಾಧೀನಪಡಿಸಿದರು. ಅದರಲ್ಲಿ ಖುರಾಸಾನ್ ಪ್ರದೇಶವೂ ಸೇರಿತ್ತು.

ಅಷ್ಟರಲ್ಲಿ ಗಡಿಪಾರಾಗಿದ್ದ ಪರ್ಷಿಯನ್ ಚಕ್ರವರ್ತಿ ಯಝ್‌ದ್‌ಗ್ರಿದ್ ತುರ್ಕ್‌ಮೆನಿಸ್ತಾನ್‌ಗೆ ತಲುಪಿದನು ಮತ್ತು ಕೆಲವು ಸೈನಿಕರನ್ನು ಒಟ್ಟುಗೂಡಿಸಲು ಯತ್ನಿಸಿದನು. ಆದರೆ ಆತ ಸಿಸ್ತಾನ್‌ನಲ್ಲಿ ಮುಸ್ಲಿಮರ ಕೈಯಲ್ಲಿ ಪರಾಜಯಗೊಂಡು ಓಡಿ ಹೋದನು. ಅವನಿಗೆ ಆಶ್ರಯ ಒದಗಿಸುವುದಾಗಿ ಭರವಸೆ ಕೊಟ್ಟ ತುರ್ಕ್ ಮುಖಂಡ ನೈಝುಕ್ ಖಾನ್‌ನ ಬಳಿಗೆ ತೆರಳುತ್ತಿದ್ದಾಗ ದಾರಿ ಮಧ್ಯೆ ದರೋಡೆಕೋರರ ತಂಡವೊಂದು ಹಣ ಮತ್ತು ಆಭರಣಕ್ಕಾಗಿ ಅವನನ್ನು ಕೊಂದು ಹಾಕಿಎತು. ಹೀಗೆ ಪರ್ಷಿಯನ್ ಚಕ್ರವರ್ತಿ ಯಝ್‌ದ್‌ಗ್ರಿಡ್ ದುರಂತ ಅಂತ್ಯಕ್ಕೀಡಾದನು. (ಮುಂದುವರಿಯುವುದು)




(7ನೇ ಪುಟದಿಂದ)

ಆದರೆ ಶಿಯಾಗಳ ಉದ್ದೇಶ ಅದಲ್ಲ, ಹುಸೈನ್ (ರ)ರವರ ಪರ್ಷಿಯನ್ ಪತ್ನಿಯರ (ಹುಸೈನ್(ರ) ರವರ ಓರ್ವ ಪತ್ನಿ ಕೊನೆಯ ಪರ್ಷಿಯನ್ ಚಕ್ರ ವರ್ತಿ ಯಝ್‌ಜುರ್ದ್ ತೃತೀಯನ ಮಗಳು) ಮಕ್ಕಳ ಮೂಲಕ ತಮ್ಮ ಪರ್ಷಿಯನ್ ರಾಷ್ಟ್ರೀಯತೆಯನ್ನು ದೃಢಪಡಿಸುವುದೇ ಇವರ ನಿಗೂಢ ಉದ್ದೇಶ. ಶಿಯಾಗಳು ಪರ್ಷಿಯಾದವರಾದ ಸಲ್ಮಾನುಲ್ ಫಾರಿಸಿಯವರಿಗೆ ಅಮಿತ ಪ್ರಾಧಾನ್ಯತೆ ನೀಡುತ್ತಾರಲ್ಲದೆ, ಅವರಿಗೆ ವಹ್ಯ್ ಲಭಿಸುತ್ತಿತ್ತು ಎಂದು ನಂಬುತ್ತಾರೆ. (ರಿಜಾಲುಲ್ ಕಶ್ಶಿ, ಪುಟ 21) ಕೆಲ ಉಗ್ರ ಶಿಯಾಗಳು ಸಲ್ಮಾನುಲ್ ಫಾರಿಸಿ ಯವರಿಗೆ ದಿವ್ಯತ್ವವನ್ನು ಕಲ್ಪಿಸುತ್ತಾರೆ. ತಮ್ಮ ಇಮಾಮರ ಕಬರ್‌ಗಳನ್ನು ದರ್ಗಾ ಮಾಡಿ ಪೂಜಿ ಸುವುದು ಶಿಯಾಗಳ ಪ್ರಮುಖ ಆರಾಧನೆಯಾಗಿದೆ.

ಅಲ್ಲಾಹನ ಪ್ರವಾದಿಗಳಿಗಿಂತಲೂ ಹೆಚ್ಚು ತಮ್ಮ ಇಮಾಮರಿಗೆ ಪ್ರಾಮುಖ್ಯತೆ ನೀಡುವ ಪ್ರವಾದಿ ಮುಹಮ್ಮದ್(ಸ) ರ ಸಹಾಬಿಗಳನ್ನೂ ಪತ್ನಿಯರನ್ನೂ ಸತ್ಯನಿಷೇಧಿಗಳೆಂದು ಸಾರುವ ಮತ್ತು ಇಸ್ಲಾಮಿನ ತತ್ವಾದರ್ಶಗಳನ್ನು ಕಾಲಡಿಗೆ ಹಾಕಿ ತಾವೇ ರಚಿಸಿದ ತತ್ವಾದರ್ಶಗಳನ್ನು ಧರ್ಮ ವಾಗಿ ಅಂಗೀಕರಿಸಿ ಇಸ್ಲಾಮಿನ ವೇಷ ಹಾಕಿ ಅಭಿ ನಯಿಸುತ್ತಿರುವ ಇಸ್ಲಾಮಿನ ಪರಮ ಶತ್ರುಗಳಾದ ಶಿಯಾಗಳೊಂದಿಗೆ ನೆಂಟಸ್ತಿಕೆ ಕುದುರಿಸಿ ಅವರ ಆದರ್ಶವನ್ನು ಅನುಸರಿಸುತ್ತಿರುವ ಕುಬೂರಿ ಸುನ್ನಿ ಗಳು ಶಿಯಾಗಳ ಇನ್ನೊಂದು ಅವತಾರವಾಗಿದ್ದಾರೆ. ಯಹೂದಿ ನಸಾರಾಗಳಿಂದ ವಂಶಪರಂಪರೆಯಾಗಿ ಶಿಯಾಗಳಿಗೆ ಹಸ್ತಾಂತರಗೊಂಡಿರುವ ದರ್ಗಾರಾಧನಾ ಸಂಪ್ರದಾಯವು ಪಿತ್ರಾರ್ಜಿತ ಸೊತ್ತಾಗಿ ಸುನ್ನಿಗಳಿಗೆ ಸಿಕ್ಕಿದೆ. ಈ ಸೊತ್ತನ್ನು ಇಕೆ, ಎಪಿ, ಶಾಫಿ, ಹನಫಿಗಳೆಂಬ ಶಿಯಾ ಸಂತತಿಗಳು ಪಾಲು ಗಟ್ಟಿ ಭರ್ಜರಿ ಗೋರಿ ವ್ಯಾಪಾರದಲ್ಲಿ ನಿರತರಾಗಿದ್ದಾರೆ. ದರ್ಗಾಪೂಜಕ ಬಣಗಳೆಲ್ಲವೂ ಇಸ್ಲಾಮಿನ ಏಕದೇವ ಸಿದ್ಧಾಂತ(ತೌಹೀದ್)ಕ್ಕೆ ಮಸಿ ಬಳಿದು ಹೊರ ಹೋದ ಮುಸ್ಲಿಮ್ ನಾಮಧಾರಿಗಳಾಗಿದ್ದಾರೆ. ಇಂತಹವರನ್ನೇ ಅಲ್ಲಾಹು ಮುಶ್ರಿಕರೆಂದು ಕರೆದಿದ್ದಾನೆ.

ಇಸ್ಲಾಮಿಗಾಗಿ ಸರ್ವಸ್ವವನ್ನೂ ತ್ಯಾಗ ಮಾಡಿ ಸ್ವರ್ಗದ ಹಕ್ಕುದಾರರೆಂದು ಅಲ್ಲಾಹನ ಪ್ರಶಂಸೆಗೆ ಪಾತ್ರರಾದ ಮಹಾನ್ ಸಹಾಬಿಗಳನ್ನು ಟೀಕಿಸಿ ಶಿಯಾ ವಿದ್ವಾಂಸರು ಬರೆದ ಹಲವು ಪುಸ್ತಕಗಳನ್ನು ಭಾಷಾಂತರಿಸಿ ಪ್ರಕಟಿಸಿದ ಮೌದೂದಿಗಳ ಕೃತ್ಯ ವನ್ನೂ ಅಲ್ಲಗಳೆಯಲಾಗದು. ಇಮಾಮ್ ಖೊಮೇನಿ ನೇತೃತ್ವದ ಇರಾಕಿನ ಶಿಯಾ ಕ್ರಾಂತಿ ಯನ್ನು ಮುಕ್ತ ಕಂಠದಿಂದ ಪ್ರಶಂಸಿಸಿದ ಮೌದೂ ದಿಗಳು ಕೂಡಾ ಮುಸ್ಲಿಮ್ ಜಗತ್ತಿನ ಶಿಥಿಲತೆ ಯಲ್ಲಿ ತಮ್ಮದಾದ ಕೊಡುಗೆ ನೀಡಿದ್ದಾರೆಂದು ಹೇಳಿದರೆ ತಪ್ಪಾಗಲಾರದು.

ಆದ್ದರಿಂದ ಈ ವಾಸ್ತವಿಕತೆಗಳತ್ತ ಮುಸ್ಲಿಮ್ ಜಗತ್ತು ಕಣ್ಣೋಡಿಸಬೇಕಾಗಿದೆ. ಮುಸ್ಲಿಮ್ ಜಗತ್ತಿನಲ್ಲಿ ಶಿಥಿಲತೆ ಬಿತ್ತಿದವರು ಯಾರು? ಸಚ್ಚರಿತರಾದ ಸಹಾಬಿಗಳನ್ನೂ ಸಹಾಬಿ ವನಿತೆಯರನ್ನೂ ಅವಾಚ್ಯವಾಗಿ ನಿಂದಿಸಿ ಅವ ಹೇಳನ ಮಾಡಿದವರೊಂದಿಗೆ ಸಂಬಂಧ ಕುದುರಿಸಿದವರು ಮತ್ತು ಅವರನ್ನು ಬೆಂಬಲಿಸಿ ಆಲಂಗಿಸಿದವರು ಯಾರು? ಮುಸ್ಲಿಮ್ ಜಗತ್ತು ನಿಷ್ಪಕ್ಷ ಪಾತಿಯಾಗಿ ಚಿಂತಿಸಲಿ. ●

# ಅಧ್ಯಾಯ - 4 ಅನ್ನಿಸಾ

ಒಟ್ಟು ಸೂಕ್ತಗಳು: 176 | ಮಕ್ಕಾದಲ್ಲಿ ಅವತೀರ್ಣಗೊಂಡದ್ದು | ಪ್ರಕಟಿತ ಸೂಕ್ತಗಳು: 5, 6, 7, 8

5 وَلَا تُؤْتُوا السُّفَهَآءَ اَمْوَالَكُمُ الَّتِيْ جَعَلَ اللّٰهُ لَكُمْ قِيٰمًا وَّارْزُقُوْهُمْ فِيْهَا وَاكْسُوْهُمْ وَقُوْلُوْا لَهُمْ قَوْلًا مَّعْرُوْفًا ۝٥

6 وَابْتَلُوا الْيَتٰمٰى حَتّٰٓى اِذَا بَلَغُوا النِّكَاحَ ۚ فَاِنْ اٰنَسْتُمْ مِّنْهُمْ رُشْدًا فَادْفَعُوْٓا اِلَيْهِمْ اَمْوَالَهُمْ ۚ وَلَا تَاْكُلُوْهَآ اِسْرَافًا وَّبِدَارًا اَنْ يَّكْبَرُوْا ۗ وَمَنْ كَانَ غَنِيًّا
فَلْيَسْتَعْفِفْ ۚ وَمَنْ كَانَ فَقِيْرًا فَلْيَاْكُلْ بِالْمَعْرُوْفِ ۗ فَاِذَا دَفَعْتُمْ اِلَيْهِمْ اَمْوَالَهُمْ فَاَشْهِدُوْا عَلَيْهِمْ ۗ وَكَفٰى بِاللّٰهِ حَسِيْبًا ۝٦

7 لِلرِّجَالِ نَصِيْبٌ مِّمَّا تَرَكَ الْوَالِدٰنِ وَالْاَقْرَبُوْنَ ۖ وَلِلنِّسَآءِ نَصِيْبٌ مِّمَّا تَرَكَ الْوَالِدٰنِ وَالْاَقْرَبُوْنَ مِمَّا قَلَّ مِنْهُ اَوْ كَثُرَ ۗ نَصِيْبًا مَّفْرُوْضًا ۝٧

8 وَاِذَا حَضَرَ الْقِسْمَةَ اُولُوا الْقُرْبٰى وَالْيَتٰمٰى وَالْمَسٰكِيْنُ فَارْزُقُوْهُمْ مِّنْهُ وَقُوْلُوْا لَهُمْ قَوْلًا مَّعْرُوْفًا ۝٨

| | | | | | | |
|---|---|---|---|---|---|---|
| | | | 5 | | | |
| ಒಂದು ಅಸ್ತಿತ್ವ قِيٰمًا | ನಿಮಗೆ لَكُمْ | ಅಲ್ಲಾಹು اللّٰهُ | ಮಾಡಿಕೊಟ್ಟಿರುವ الَّتِيْ جَعَلَ | ನಿಮ್ಮ ಸೊತ್ತುಗಳನ್ನು اَمْوَالَكُمُ | ತಿಳಿಗೇಡಿಗಳಿಗೆ السُّفَهَآءَ | ಮತ್ತು ನೀವು ಕೊಡಬೇಡಿರಿ وَلَا تُؤْتُوا |
| ಗೌರವದ مَّعْرُوْفًا | ಮಾತನ್ನು قَوْلًا | ಅವರೊಡನೆ لَهُمْ | ಮತ್ತು ಹೇಳಿರಿ وَقُوْلُوْا | ಮತ್ತು ಅವರಿಗೆ ಬಟ್ಟೆಬರೆಗಳನ್ನು ಕೊಡಿರಿ وَاكْسُوْهُمْ | ಅದರಿಂದ فِيْهَا | ಮತ್ತು ಅವರಿಗೆ ಆಹಾರವನ್ನು ಕೊಡಿರಿ وَّارْزُقُوْهُمْ |
| | | | 6 | | | |
| ಒಂದು ವೇಳೆ ನೀವು ಕಂಡರೆ فَاِنْ اٰنَسْتُمْ | ವಿವಾಹ (ಪ್ರಾಯ)ಕ್ಕೆ النِّكَاحَ | ಅವರು ತಲುಪಿದರೆ اِذَا بَلَغُوا | ಹಾಗೆ, ವರೆಗೆ حَتّٰٓى | ಅನಾಥರನ್ನು الْيَتٰمٰى | ನೀವು ಪರೀಕ್ಷಿಸುತ್ತೀರಿ وَابْتَلُوا | |
| ಅದನ್ನು ನೀವು ತಿನ್ನಬಾರದು وَلَا تَاْكُلُوْهَآ | ಅವರ ಸೊತ್ತುಗಳನ್ನು اَمْوَالَهُمْ | ಅವರಿಗೆ اِلَيْهِمْ | ಆಗ ನೀವು ಕೊಡಿರಿ فَادْفَعُوْٓا | ಕರ್ತವ್ಯ ಪ್ರಜ್ಞೆಯನ್ನು رُشْدًا | ಅವರಲ್ಲಿ مِّنْهُمْ | |
| ಅವನು ಮಾನ್ಯತೆ ಪಾಲಿಸಲಿ فَلْيَسْتَعْفِفْ | ಧನಿಕ غَنِيًّا | ಯಾರಾದರೂ ಆಗಿದ್ದರೆ وَمَنْ كَانَ | ಅವರು ದೊಡ್ಡವರಾಗುವರೆಂದು اَنْ يَّكْبَرُوْا | ಆತುರದಿಂದ وَّبِدَارًا | ಮಿತಿ ಮೀರಿದವರಾಗಿ اِسْرَافًا | |
| ಅವರಿಗೆ اِلَيْهِمْ | ಆದರೆ ನೀವು ವಹಿಸಿಕೊಟ್ಟರೆ فَاِذَا دَفَعْتُمْ | ಸದಾಚಾರ ಅನುಸರಿಸಿ بِالْمَعْرُوْفِ | ಹಾಗಿದ್ದರೆ ಅವನು ತಿನ್ನಲಿ فَلْيَاْكُلْ | ಬಡವ فَقِيْرًا | ಮತ್ತು ಯಾರಾದರೂ ಆಗಿದ್ದರೆ وَمَنْ كَانَ | |
| ಲೆಕ್ಕ ನೋಡುವವನಾಗಿ حَسِيْبًا | ಅಲ್ಲಾಹು بِاللّٰهِ | ಸಾಕು وَكَفٰى | ಅವರ ಮೇಲೆ عَلَيْهِمْ | ಆಗ ನೀವು ಸಾಕ್ಷಿಯಾಗಿರಿಸಿರಿ فَاَشْهِدُوْا | ಅವರ ಸೊತ್ತುಗಳನ್ನು اَمْوَالَهُمْ | |
| | | | 7 | | | |
| ಮತ್ತು ಸ್ತ್ರೀಯರಿಗಿದೆ وَلِلنِّسَآءِ | ಮತ್ತು ಆಪ್ತ ಕುಟುಂಬದವರು وَالْاَقْرَبُوْنَ | ಮಾತಾಪಿತರು الْوَالِدٰنِ | ಬಿಟ್ಟು ಹೋಗಿರುವುದರಲ್ಲಿ مِّمَّا تَرَكَ | ಪಾಲು نَصِيْبٌ | ಪುರುಷರಿಗಿದೆ لِلرِّجَالِ | |
| ಅದರಿಂದ مِنْهُ | ಕಡಿಮೆಯಾಗಿರುವುದರಲ್ಲಿ مِمَّا قَلَّ | ಮತ್ತು ಆಪ್ತ ಕುಟುಂಬದವರು وَالْاَقْرَبُوْنَ | ಮಾತಾಪಿತರು الْوَالِدٰنِ | ಬಿಟ್ಟು ಹೋಗಿರುವುದರಲ್ಲಿ مِّمَّا تَرَكَ | ಪಾಲು نَصِيْبٌ | |
| | ನಿಗದಿತವಾದ مَّفْرُوْضًا | ಪಾಲು نَصِيْبًا | ಅಥವಾ ಹೆಚ್ಚಾದ اَوْ كَثُرَ | | | |
| | | | 8 | | | |
| ಅವರಿಗೆ ನೀವು ಕೊಡಿರಿ فَارْزُقُوْهُمْ | ಮತ್ತು ಬಡವರು وَالْمَسٰكِيْنُ | ಮತ್ತು ಅನಾಥರು وَالْيَتٰمٰى | ಸಂಬಂಧಿಕರು اُولُوا الْقُرْبٰى | ಪಾಲು ಮಾಡುವಲ್ಲಿ الْقِسْمَةَ | ಮತ್ತು ಹಾಜರಿದ್ದರೆ وَاِذَا حَضَرَ | |
| | ಗೌರವದ مَّعْرُوْفًا | ಮಾತುಗಳನ್ನು قَوْلًا | ಅವರೊಡನೆ لَهُمْ | ಮತ್ತು ನೀವು ಹೇಳಿರಿ وَقُوْلُوْا | ಅದರಿಂದ مِّنْهُ | |

5. ಅಲ್ಲಾಹು ನಿಮಗೆ ಒಂದು ಅಸ್ತಿತ್ವವಾಗಿ ಮಾಡಿಕೊಟ್ಟಿರುವ ನಿಮ್ಮ ಸೊತ್ತುಗಳನ್ನು ನೀವು ತಿಳಿಗೇಡಿಗಳಿಗೆ (ಬಿಟ್ಟು) ಕೊಡಬೇಡಿರಿ. ಆದರೆ ಅದರಿಂದ ನೀವು ಅವರಿಗೆ ಆಹಾರ ಹಾಗೂ ಬಟ್ಟೆಬರೆಗಳನ್ನು ಕೊಡಿರಿ ಮತ್ತು ಅವರೊಡನೆ ಗೌರವದ ಮಾತುಗಳನ್ನಾಡಿರಿ.
6. ಅನಾಥರು ವಿವಾಹ(ಪ್ರಾಯ)ಕ್ಕೆ ತಲುಪುವ ತನಕ ಅವರನ್ನು (ಅವರ ಬೌದ್ಧಿಕ ಸಾಮರ್ಥ್ಯವನ್ನು) ನೀವು ಪರೀಕ್ಷಿಸುತ್ತಿರಿ. ಆಗ ಅವರಲ್ಲಿ ನೀವು ಕರ್ತವ್ಯ ಪ್ರಜ್ಞೆಯನ್ನು ಕಂಡರೆ ಅವರ ಸೊತ್ತುಗಳನ್ನು ಅವರಿಗೆ(ವಹಿಸಿ)ಕೊಡಿರಿ. ಮತ್ತು ಅವರು ದೊಡ್ಡವರಾಗುವರೆಂದು (ಹೆದರಿ) ನೀವು ಮಿತಿಮೀರಿದವರಾಗಿ ಅದನ್ನು ಆತುರದಿಂದ ತಿಂದು ಬಿಡಬೇಡಿರಿ (ಅನಾಥರ ಸಂರಕ್ಷನು) ಧನಿಕನಾಗಿದ್ದರೆ ಅವನು (ಅನಾಥರ ಸೊತ್ತಿನಿಂದ ಏನನ್ನೂ ತೆಗೆಯದೆ) ಮಾನ್ಯತೆ ಪಾಲಿಸಲಿ ಮತ್ತು ಯಾರಾದರೂ ಬಡವನಾಗಿದ್ದರೆ ಅವನು ಸದಾಚಾರದನ್ವಯ (ಕನಿಷ್ಟವೇತನದ ರೂಪದಲ್ಲಿ) ತಿನ್ನಲಿ. ಆದರೆ ಅವರ ಸೊತ್ತುಗಳನ್ನು ಅವರಿಗೆ ನೀವು (ವಹಿಸಿ) ಕೊಡುವಾಗ (ಸೂಕ್ತ ವ್ಯಕ್ತಿಗಳನ್ನು) ಸಾಕ್ಷಿಯಾಗಿರಿಸಿಕೊಳ್ಳಿರಿ. ಲೆಕ್ಕ ನೋಡುವವನಾಗಿ ಅಲ್ಲಾಹನೇ ಸಾಕು.
7. ಮಾತಾಪಿತರೂ ಆಪ್ತ ಬಂಧುಗಳೂ ಬಿಟ್ಟು ಹೋಗಿರುವುದರಲ್ಲಿ (ಸಂಪತ್ತಿನಲ್ಲಿ) ಪುರುಷರಿಗೆ ಪಾಲಿದೆ ಮತ್ತು ಮಾತಾಪಿತರೂ ಆಪ್ತ ಬಂಧುಗಳೂ ಬಿಟ್ಟು ಹೋಗಿರುವುದರಲ್ಲಿ ಸ್ತ್ರೀಯರಿಗೂ ಪಾಲಿದೆ. ಅಂದರೆ (ಸಂಪತ್ತು) ಕಡಿಮೆಯಿರಲಿ ಅಥವಾ ಹೆಚ್ಚಿರಲಿ (ಅದು) ನಿಗದಿತವಾದ ಒಂದು ಪಾಲು.
8. (ಸಂಪತ್ತನ್ನು) ಪಾಲುಮಾಡುವಲ್ಲಿ ಸಂಬಂಧಿಕರು, ಅನಾಥರು ಮತ್ತು ನಿರ್ಗತಿಕರು ಹಾಜರಿದ್ದರೆ ಅವರಿಗೆ ಅದರಿಂದ (ಏನಾದರೂ) ಕೊಡಿರಿ ಮತ್ತು ಅವರೊಡನೆ ಗೌರವದ ಮಾತುಗಳನ್ನಾಡಿರಿ.*

Name & Address:

**PAVITHRA SANDESHA**
*Kannada Fortnightly*
Polymer House, 2nd Floor, Nellikai Road, Mangalore - 575 001

Regd. With RNI No.: 63987/96
Postal Regd. No. KA/SK/MNG/160/2015-2017
Licenced to Post without prepayment Licence No. WPP/SK/MNG-104/2015-2017
Posted at Head Post Office, Mangalore.
Posting Date: 13th & 28th of Every Month
Publication Date: 10th & 25th Every Month

# ಮಕ್ಕಳ ಮನಸ್ಸಲ್ಲಿ

(8ನೇ ಪುಟದಿಂದ)

ನಮ್ಮ ಬಾಲ್ಯದಲ್ಲಿ ಊಟದ ತುತ್ತು ಒಂದಗುಳು ಕೆಳಗೆ ಬೀಳಿಸಲೂ ಬಿಡುತ್ತಿರಲಿಲ್ಲ. ಅದಕ್ಕಾಗಿ ನರಕದ ಭಯವನ್ನು ಮೂಡಿಸುತ್ತಿದ್ದರು. ಅಲ್ಲಾಹನ ಶಿಕ್ಷೆಗೆ ಹೆದರಿ ಮಕ್ಕಳು ಜಾಗರೂಕತೆಯಿಂದ ಆಹಾರ ಸೇವಿಸುತ್ತಿದ್ದರು. ಇಂದು ಹೆಚ್ಚಿನ ಮಕ್ಕಳಿಗೆ ಹಸಿವಿನ ಬಗ್ಗೆ ಗೊತ್ತೇ ಇಲ್ಲ. ಪ್ಲೇಟ್ ತುಂಬಾ ಆಹಾರ ತುಂಬಿಸಿಕೊಡುವ




ಅಮ್ಮಂದಿರು, ಅರ್ಧಂಬರ್ಧ ತಿಂದು ಉಳಿದ ಆಹಾರವನ್ನು ಹಾಳುಗೆಡಹುವ ಮಕ್ಕಳಿಗೆ ಕಮಕ್ ಕಿಮಕ್ ಅನ್ನದೆ ಸಾಥ್ ಕೊಡುತ್ತಾರೆ.

ಮೊನ್ನೆ ಸ್ನೇಹಿತರೊಬ್ಬರು ಕಳುಹಿಸಿದ ವೀಡಿಯೋ ಒಂದನ್ನು ವೀಕ್ಷಿಸುತ್ತಿದ್ದೆ. ಬೆಚ್ಚಿ ಬೀಳಿಸುವಂತಹ ಘಟನೆಗಳನ್ನು ಕೇಳಿ ಮನಸ್ಸಿನ ನೆಮ್ಮದಿಯೇ ಹಾಳಾಗಿ ಹೋಯ್ತು. ಪ್ರಪಂಚದಲ್ಲಿ ಪ್ರತೀದಿನ ಹಸಿವಿನಿಂದ ಸಾಯುವ ಜನರ ಸಂಖ್ಯೆ, ಒಂದು ಹನಿ ಚಹಾಕ್ಕಾಗಿ ರೈಲ್ವೇ ಪ್ರಯಾಣಿಕರು ಕುಡಿದೆಸೆಯುವ ಮಣ್ಣಿನ ಪಾತ್ರೆಗೆ ಮುಗಿದು ಬೀಳುವ ಬಡ ಮಕ್ಕಳು. ತಮ್ಮ ಜೀವನದಲ್ಲಿ ಹಾಲು ಎಂದರೇನೆಂದೇ ಕಂಡಿರದ ಕೂಸುಗಳು. ಹಸಿವಿನಿಂದ ಕಂಗೆಟ್ಟು ಮೃತ ದೇಹಗಳನ್ನೇ ಮಾರಿ ತಿನ್ನುವ ಜನರು ನಮ್ಮ ಭಾರತದಲ್ಲಿ ಇದ್ದಾರೆ ಎಂದರಿತಾಗ ಕಣ್ಣೀರುಕ್ಕಿತು.

ಬಡತನದಿಂದ, ಪೋಷಕಾಂಶದ ಕೊರತೆಯಿಂದ ಸಾಯುವ ಸಾವಿರಾರು ಮಕ್ಕಳಿರುವಾಗ ನಾವು ನಮ್ಮ ಮಕ್ಕಳಿಗೆ ಅವಶ್ಯಕತೆಗಿಂತ ಹೆಚ್ಚು ಕೊಟ್ಟು ಆಹಾರ ಹಾಳು ಮಾಡುತ್ತಿದ್ದೇವಲ್ಲಾ ಎಂದುಕೊಂಡು ಬೇಸರವಾಯಿತು. ಅಲ್ಲಾಹನು ನಮಗೆ ನೀಡಿರುವ ಸೌಭಾಗ್ಯವನ್ನು ನಾವು ದುರುಪಯೋಗಪಡಿಸಿಕೊಳ್ಳುತ್ತಿದ್ದೇವೆ. "ನೆರೆಯವನು ಹಸಿದಿರುವಾಗ ಹೊಟ್ಟೆ ತುಂಬಾ ಉಣ್ಣುವವನು ನನ್ನವನಲ್ಲ" ಎಂಬ ಪ್ರವಾದಿ ವಚನವನ್ನು ನೆನಪಿಟ್ಟುಕೊಂಡರೆ ನಾವ್ಯಾರೂ ಆಹಾರ ಹಾಳುಗೆಡಹುವುದಾಗಲೀ, ಅನಗತ್ಯ ಖರ್ಚನ್ನಾಗಲೀ ಮಾಡಲಾರೆವು.

ಮಕ್ಕಳಿಗೆ ಆಹಾರದ ಮಹತ್ವವನ್ನೂ ಹಸಿವಿನ ನೋವನ್ನೂ ಚಿಕ್ಕಂದಿನಿಂದಲೇ ಕಲಿಸಿ ಕೊಡಬೇಕಿದೆ. ನಾವು ಪಟ್ಟ ಕಷ್ಟ ನಮ್ಮ ಮಕ್ಕಳಿಗೆ ಬೇಡ ಎಂಬ ಡೈಲಾಗನ್ನು ಬದಿಗಿಟ್ಟು ಕೆಳಗೆ ಕೊಟ್ಟಿರುವ ತತ್ವಗಳನ್ನು ಅಳವಡಿಸಿಕೊಳ್ಳಬೇಕು.

# ಸದ್ಗುಣಗಳ ಬೀಜ ಬಿತ್ತಿರಿ

1. ಮಕ್ಕಳಿಗೆ ನಮಗಿಂತಲೂ ಉತ್ತಮ ಸಂಸ್ಕಾರ ನೀಡುವ ಎಂಬ ವಿಶಾಲ ಮನಸ್ಕತೆಯನ್ನು ಬೆಳೆಸಿಕೊಳ್ಳಿ.
2. ಪ್ರಪಂಚದ ಇತರ ಕಡೆ ನಡೆಯುವ ಘಟನೆಗಳನ್ನು ತಿಳಿಸಿ ಮಕ್ಕಳು ಸ್ವಯಂ ಆಹಾರವನ್ನು ಹಾಳು ಮಾಡದಿರಲು ಕಲಿಸಿ.
3. ಯಾವುದಾದರೂ ವಸ್ತುವನ್ನು ಖರೀದಿಸಬೇಕೆಂದು ಹಠ ಹಿಡಿದರೆ ಅದು ನಿಜವಾಗಿಯೂ ಉಪಯುಕ್ತವೇ ಎಂದು ದೃಢಪಡಿಸಿಕೊಂಡು, ಹೌದಾದರೆ ಮಾತ್ರ ಖರೀದಿಸಿ, ಇಲ್ಲವೆಂದಾದರೆ ನಯವಾಗಿ ತಿಳಿಹೇಳಿ.
4. ಚಿಕ್ಕಂದಿನಿಂದಲೇ ಹಣ ಸಂಗ್ರಹದ ಅಭ್ಯಾಸ ಬೇಡ. ಅದರ ಬದಲು "ಪಿಗ್ಗಿ ಬ್ಯಾಂಕ್"ನಂತಹ ಅಭ್ಯಾಸಗಳನ್ನು ರೂಢಿಸಿ ತಾವಾಗಿಯೇ ಉಳಿತಾಯ ಮಾಡುವಂತೆ ಪ್ರೋತ್ಸಾಹಿಸಿ.
5. ಅವಶ್ಯಕತೆಯಿರುವವರಿಗೆ ದಾನವನ್ನು ಮಕ್ಕಳ ಕೈಯಿಂದಲೇ ಕೊಡಿಸಿ. ಇದರಿಂದ ಮುಂದಕ್ಕೆ ಮಕ್ಕಳಿಗೂ ಆ ಅಭ್ಯಾಸ ಉಂಟಾಗಬಹುದು.
6. ದುಂದು ವೆಚ್ಚದಿಂದ ತಡೆಯಿರಿ.
7. ಚಿಕ್ಕ ಮಕ್ಕಳ ಬಾಯಲ್ಲಿ ಬರುವ ಮಾತುಗಳು ಕೇಳಲು ಸೊಗಸು. ಹಾಗೆಂದು ತಪ್ಪಾಗಿ ಮಾತನಾಡಿದಾಗ ಕೂಡಲೇ ತಿದ್ದಿ. ತಪ್ಪು ಮಾತುಗಳನ್ನು ಯಾವತ್ತೂ ಪ್ರೋತ್ಸಾಹಿಸುವ ಪ್ರಯತ್ನ ಬೇಡ.
8. ಮಕ್ಕಳಿಗೆ ಅವರ ಸಾಮಾಜಿಕ ಜವಾಬ್ದಾರಿಗಳನ್ನೂ ತಿಳಿಸಿ.
9. ಮಕ್ಕಳಿಗೆ ಲೌಕಿಕ ವಿದ್ಯಾಭ್ಯಾಸದ ಜೊತೆಗೆ ಧಾರ್ಮಿಕ ವಿದ್ಯಾಭ್ಯಾಸವನ್ನೂ ಕೊಡಿಸಿ.
10. ಹಿರಿಯರನ್ನು ಗೌರವಿಸುವುದು, ಮಾತು ಪಾಲಿಸುವುದು ಇವೆಲ್ಲವನ್ನು ನಯವಾಗಿಯೇ ತಿಳಿಸಿ ಕಲಿಸಿ ಕೊಡಬೇಕಾದದ್ದು ಹೆತ್ತವರ ಕರ್ತವ್ಯ.
11. ಚಿಕ್ಕಂದಿನಿಂದಲೇ ಮೊಬೈಲ್ ಫೋನ್, ಟ್ಯಾಬ್, ಟಿವಿಯ ಅಭ್ಯಾಸವನ್ನು ಮಾಡಿಸದಿರಿ. ಬದಲಿಗೆ ಹೊರಾಂಗಣ ಆಟಕ್ಕೆ ಪ್ರೋತ್ಸಾಹಿಸಿ. ಆಗದಿದ್ದರೆ ಮೆದುಳು ಚುರುಕಾಗಿಸುವ ಆಟವನ್ನು ಆಡಿಸಿ.

ಕೆಲ ತಾಯಂದಿರು ಹೆಮ್ಮೆಯಿಂದ ನಮ್ಮ ಮಗುವಿಗೆ ಮೊಬೈಲ್ ಒತ್ತಲು ಗೊತ್ತು. ಟಿವಿ ಚಾನೆಲ್ ಬದಲಾಯಿಸಲು ಗೊತ್ತು ಎಂದು ಹೆಮ್ಮೆ ಪಡುತ್ತಾರೆ. ಇದು ಹೆಮ್ಮೆಯ ವಿಚಾರ ಅಲ್ಲವೇ ಅಲ್ಲ. ಬದಲಿಗೆ ಮಗುವಿನ ಬೆಳವಣಿಗೆಯ ಬಹುಮುಖ್ಯ ಹಂತದಲ್ಲಿ ಹೆತ್ತವರಿಡುವ ತಪ್ಪು ಹೆಜ್ಜೆಯಾಗಿದೆ. ಮಗುವಿಗೆ ಹತ್ತು ವಯಸ್ಸಾಗುವ ವರೆಗೆ ಯಾವ ಮೌಲ್ಯವನ್ನು ಮಗುವಿನ ಮನದಲ್ಲಿ ತುಂಬುತ್ತೇವೆಯೋ ಆ ಮೌಲ್ಯಗಳು ಜೀವನ ಪರ್ಯಂತ ಅವರ ಜತೆಯಿರುತ್ತವೆ.

ನಮಗೆ ಸಿಗದೇ ಇದ್ದದ್ದು ನಮ್ಮ ಮಕ್ಕಳಿಗೆ ಸಿಗಲಿ ಎಂಬ ವಾದವನ್ನಿಟ್ಟುಕೊಂಡು ದುಂದುವೆಚ್ಚದ ಅಭ್ಯಾಸ ಮಾಡಿದರೆ ನಾಳೆ ನಮ್ಮ ಮಕ್ಕಳು ದುರಭ್ಯಾಸದ ದಾಸರಾದರೆ ಕೊರಗಬೇಕಾದೀತು. ಅದಕ್ಕಾಗಿ ಮಕ್ಕಳ ಉತ್ತಮ ಭವಿಷ್ಯವನ್ನು ರೂಪಿಸುವ ಸಲುವಾಗಿ ಶಿಸ್ತಿನಿಂದ ಬೆಳೆಸಿ.

ಕೊನೆಯದಾಗಿ ಪುಟ್ಟ ಮಕ್ಕಳ ಮನಸ್ಸು ಹಸಿ ಮಣ್ಣಿನಂತೆ. ಏನನ್ನು ಬಿತ್ತುತ್ತೇವೆಯೋ ಅದೇ ಬೆಳೆಯಾಗುತ್ತದೆ. ಹಾಗಾಗಿ ನಮ್ಮ ಮಕ್ಕಳ ಮನಸ್ಸಿನಲ್ಲಿ ಸ್ನೇಹ, ಪ್ರೀತಿಯ ಬೀಜವನ್ನು ಬಿತ್ತಿ ಸಮಾಜದಲ್ಲಿ ಉತ್ತಮ ಪ್ರಜೆಗಳನ್ನಾಗಿಸೋಣ. ದ್ವೇಷದ ಬೀಜ ಬಿತ್ತಿ ಸಮಾಜ ಕಂಟಕರನ್ನಾಗಿಸುವುದು ಬೇಡ.

✍ ಅಬ್ಬಾಸ್ ಅಹ್ಮದ್



Printed, Published & Owned by RIYAZ AHMED on behalf of SATHYA PRAKASHANA PUBLICATION TRUST MANGALORE, Printed at Digantha Mudrana Ltd., Yeyyadi, Mangalore, D.K. Published at 20-2-155/1, 2nd Floor, Polymer House Bldg., Nellikai Road, Mangalore - 575 001, D.K. Editor: M.G. Muhammad